| ಕ್ರ. ಸಂ. | ಸರ್ವೆ ನಂ. | ಐನ್ ಎ-ಗು | ಖರಾಬ್ ಎ-ಗು | ಬಾಕಿ ಎ-ಗು | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. |
|---|---|---|---|---|---|---|---|---|
| 6. | 122/2 | 0-09 | - | 0-09 | ದಕ್ಷಿಣಕ್ಕೆ | : | ಓಣಿ | |
| | **ಒಟ್ಟು** | **3-11** | **0-12** | **2-39** | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಲೋಕನಾಥ್‌ರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ (ಕೈಅ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಅಧಿಸೂಚನೆ

**ಸಂಖ್ಯೆ:ಸಿಐ:174:ಎಸ್‌ಪಿಕ್ಯೂ:2007, ಬೆಂಗಳೂರು, ದಿನಾಂಕ:17ನೇ ಮಾರ್ಚ್ 2007**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ (1986ರ ಕರ್ನಾಟಕ ಕಾಯ್ದೆ 18) ವಿಧಿ 1(3) ದತ್ತವಾದ ಅಧಿಕಾರದ ಮೇರೆಗೆ ಕರ್ನಾಟಕ ಸರ್ಕಾರವು ಈ ಕೆಳಕಂಡ ಷೆಡ್ಯೂಲ್‌ನಲ್ಲಿ ಕಾಲಂ 2ರಲ್ಲಿ ನಮೂದಿಸಿರುವ ಬೆಂಗಳೂರು ಗ್ರಾಮಾಂತರ ಜಿಲ್ಲೆ, ರಾಮನಗರ ತಾಲ್ಲೂಕು, ಕಸಬಾ ಹೋಬಳಿ, ಬೋಳಪ್ಪನಹಳ್ಳಿ ಗ್ರಾಮದ ಸರ್ವೆ ನಂಬರ್‌ನಲ್ಲಿ ಕಾಲಂ 6 ರಿಂದ 9 ರಲ್ಲಿ ತೋರಿಸಿರುವ ಚೆಕ್ಕುಬಂದಿಯುಳ್ಳ ಕಲಂ 3 ರಿಂದ 5 ರಲ್ಲಿ ನಮೂದಿಸಿರುವ ವಿಸ್ತೀರ್ಣದ ಜಮೀನುಗಳಿಗೆ ಮೇಲ್ಕಂಡ ಕಾಯ್ದೆಯ ಅಧ್ಯಾಯ-7ರ ವಿಧಿಗಳು ಈ ಅಧಿಸೂಚನೆಯಲ್ಲಿ ಪ್ರಚುರಗೊಂಡ ದಿನಾಂಕದಿಂದ ಅನ್ವಯವಾಗುವಂತೆ ಘೋಷಿಸಲಾಗಿದೆ.

**ಗ್ರಾಮ:** ಬೋಳಪ್ಪನಹಳ್ಳಿ **ಹೋಬಳಿ:** ಕಸಬಾ

**ತಾಲ್ಲೂಕು:** ರಾಮನಗರ **ಜಿಲ್ಲೆ:** ಬೆಂಗಳೂರು ಗ್ರಾಮಾಂತರ

| | | ವಿಸ್ತೀರ್ಣ | | | ಚೆಕ್ಕುಬಂದಿ | | | |
|---|---|---|---|---|---|---|---|---|
| ಕ್ರ. ಸಂ. | ಸರ್ವೆ ನಂ. | ಐನ್ ಎ-ಗು | ಖರಾಬ್ ಎ-ಗು | ಬಾಕಿ ಎ-ಗು | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. |
| 1. | 90 | 0-39 | 0-02 | 0-37 | | | | |
| 2. | 91 | 0-29 | - | 0-29 | | | | |
| 3. | 92 | 0-27 | - | 0-27 | ಪೂರ್ವಕ್ಕೆ | : | ಸ.ನಂ.93 | |
| 4. | 121 | 0-10 | 0-10 | - | ಪಶ್ಚಿಮಕ್ಕೆ | : | ಸ.ನಂ.77,79 | |
| 5. | 122/1 | 0-17 | - | 0-17 | ಉತ್ತರಕ್ಕೆ | : | ಸ.ನಂ.89, ಹಳ್ಳ | |
| 6. | 122/2 | 0-09 | - | 0-09 | ದಕ್ಷಿಣಕ್ಕೆ | : | ಓಣಿ | |
| | **ಒಟ್ಟು** | **3-11** | **0-12** | **2-39** | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಲೋಕನಾಥ್‌ರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ (ಕೈಅ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಅಧಿಸೂಚನೆ

**ಸಂಖ್ಯೆ:ಸಿಐ:174:ಎಸ್‌ಪಿಕ್ಯೂ:2007, ಬೆಂಗಳೂರು, ದಿನಾಂಕ:17ನೇ ಮಾರ್ಚ್ 2007**

**1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ ವಿಧಿ 28(1)ರ ಮೇರೆಗೆ**

ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಜಮೀನುಗಳು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ವತಿಯಿಂದ ರಾಮನಗರ ರೇಷ್ಮೆ ಮಾರುಕಟ್ಟೆ ಉಪಯೋಗದ ಉದ್ದೇಶಕ್ಕಾಗಿ ಸ್ವಾಧೀನಪಡಿಸಿಕೊಳುವ ಸಲುವಾಗಿ ಕರ್ನಾಟಕ ರಾಜ್ಯ ಸರ್ಕಾರಕ್ಕೆ ಬೇಕಾಗಿದೆ.

1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ವಿಧಿ 28(1) (1966ರ 18ನೇ ನಂ.ಕಾಯ್ದೆಯ) ಪ್ರಕಾರ ದತ್ತವಾದ ಅಧಿಕಾರದ ಮೇರೆಗೆ ಸದರಿ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳುವ ಉದ್ದೇಶದಿಂದ ಈ ನೋಟೀಸು ಪ್ರಕಟಿಸಲಾಗಿದೆ.

ಮೇಲ್ಕಂಡ ಕಾಯ್ದೆ ವಿಧಿ 35ರ ಮೇರೆಗೆ ಕೆಲಸ ನಿರ್ವಹಿಸಲು ಈ ಜಮೀನುಗಳಿಗೆ ಪ್ರವೇಶಿಸುವ ಯಾವುದೇ ವ್ಯಕ್ತಿಯನ್ನು ತಡೆಯುವುದಾಗಲೀ ಅಥವಾ ಅಡ್ಡಿಪಡಿಸುವುದಾಗಲೀ ಮಾಡಕೂಡದೆಂದು ಈ ಜಮೀನುಗಳಲ್ಲಿ ಆಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೂ ಈ ಮೂಲಕ ಎಚ್ಚರಿಸಲಾಗಿದೆ.

ಈ ಅಧಿಸೂಚನೆ ಪ್ರಕಟಣೆಯಾಗಿರುವ ತಾರೀಖಿನ ನಂತರ ಬೆಂಗಳೂರು ವಿಭಾಗದ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ವಿಶೇಷ ಭೂಸ್ವಾಧೀನಾಧಿಕಾರಿಯವರ ಅನುಮತಿಯಿಲ್ಲದೆ ಸದರಿ ಜಮೀನುಗಳನ್ನು ವಿಲೇ ಮಾಡುವ ಒಪ್ಪಂದ ಕ್ರಯ, ಭೋಗ್ಯ, ಲೀಸ್, ಅದಲು-ಬದಲು ವಗೈರೆ ಮಾಡುವಂತಿಲ್ಲ ಮತ್ತು ಸದರಿ ಜಮೀನುಗಳಲ್ಲಿ ಈ ಅಧಿಸೂಚನೆ ಪ್ರಕಟಣೆ ನಂತರ ಕಟ್ಟಡಗಳ ನಿರ್ಮಾಣ ಮತ್ತಿತರ ಅಭಿವೃದ್ಧಿ ಕೆಲಸಗಳನ್ನು ಮಾಡುವಂತಿಲ್ಲ. ಒಂದು ವೇಳೆ ಮಾಡಿದ್ದರೂ 1894ರ ಭೂಸ್ವಾಧೀನ ಕಾಯ್ದೆ ವಿಧಿ (ನಿಯಮ 7) ಕರ್ನಾಟಕ ತಿದ್ದುಪಡಿ ಮಾಡಿರುವ ಕಾಯ್ದೆ 17:1961 ಮತ್ತು 1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ ವಿಧಿ 30ನ್ನು ಓದಿಕೊಳ್ಳುವ ಮೇರೆಗೆ ಪರಿಹಾರಧನ ನಿಗದಿ ಮಾಡುವಾಗ ಈ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ ಮತ್ತು ಅಂತಿಮವಾಗಿ ಜಮೀನುಗಳನ್ನು ಸ್ವಾಧಿನಪಡಿಸಿಕೊಳ್ಳಲಾಗುವುದು.

ಈ ಜಮೀನುಗಳ ಒಂದು ನಕ್ಷೆಯನ್ನು ಬೆಂಗಳೂರು ವಿಭಾಗದ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ವಿಶೇಷ ಭೂಸ್ವಾಧೀನಾಧಿಕಾರಿಯವರ ಕಛೇರಿಯಲ್ಲಿ ಪರಿಶೀಲನೆಗೆ ಇಡಲಾಗಿದೆ.

**ಗ್ರಾಮ:** ಬೋಳಪ್ಪನಹಳ್ಳಿ **ಹೋಬಳಿ:** ಕಸಬಾ **ತಾಲ್ಲೂಕು:** ರಾಮನಗರ **ಜಿಲ್ಲೆ:** ಬೆಂಗಳೂರು ಗ್ರಾಮಾಂತರ

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ಸ್ವಾಧೀನಪಡಿಸಿಕೊಳ್ಳುತ್ತಿರುವ ವಿಸ್ತೀರ್ಣ | | | ಆಕಾರ (ರೂ) | ತರಹೆ | ಚೆಕ್ಕುಬಂದಿ | | | |
|---|---|---|---|---|---|---|---|---|---|---|---|---|
| | | | | ಐನ್ ಎ-ಗು | ಖರಾಬು ಎ-ಗು | ಉಳಿಕೆ ಎ-ಗು | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. |
| 1. | ಸಿ.ವಿ. ಗುರುಮೂರ್ತಿ, ಸಿ.ವಿ. ಗೋವಿಂದಪ್ಪ, ಸಿ.ವಿ. ವೆಂಕಟಪ್ಪ | ಸಿ.ವಿ. ಗುರುಮೂರ್ತಿ, ಸಿ.ವಿ. ಗೋವಿಂದಪ್ಪ, ಸಿ.ವಿ. ವೆಂಕಟಪ್ಪ | 90 | 0-39 | 0-02 | 0-37 | 5-47 | ಭಾಗಾಯ್ತು | 91 | 79 | 89 | 122 |
| 2. | ಕೆ. ರಾಮಚಂದ್ರಪ್ಪ ಬಿನ್ ಬಿ.ಎಂ. ಕೃಷ್ಣಪ್ಪ | ಕೆ. ರಾಮಚಂದ್ರಪ್ಪ | 91 | 0-29 | - | 0-29 | 4-06 | ಭಾಗಾಯ್ತು | 92 | 90 | 89 | 122 |
| 3. | ಮನಮೋಹನ ಪ್ರಸಾದ್ ಬಿನ್ ಲೇಟ್ ಜೆ.ಕೃಷ್ಣಮೂರ್ತಿಪ್ರಸಾದ್, ಕೆ. ಮನಮೋಹನ ಪ್ರಸಾದ್ ಬಿನ್ ಲೇಟ್ ಜೆ. ಕೃಷ್ಣಮೂರ್ತಿ ಪ್ರಸಾದ್, ಕೆ. ಮನಮೋಹನ ಪ್ರಸಾದ್ ಬಿನ್ ಲೇಟ್ ಜೆ. ಕೃಷ್ಣಮೂರ್ತಿಪ್ರಸಾದ್, ಮನಮೋಹನ ಪ್ರಸಾದ್ ಬಿನ್ ಲೇಟ್ ಜೆ.ಕೃಷ್ಣಮೂರ್ತಿಪ್ರಸಾದ್ | ಕೆ. ಮನಮೋಹನ ಪ್ರಸಾದ್, ಮನಮೋಹನ ಪ್ರಸಾದ್, ಮನಮೋಹನ ಪ್ರಸಾದ್, ಕೆ.ಮನಮೋಹನ ಪ್ರಸಾದ್ | 92 | 0-27 | - | 0-27 | 3-57 | ಭಾಗಾಯ್ತ | 121 | 91 | 89 | 122 |
| 4. | ಎನ್.ಎ. ಖರಾಬ್ | - | 121 | 0-10 | 0-10 | - | - | NAK | 93 | 122, 92 | ಹಳ್ಳ | ಓಣಿ |
| 5. | ಕೆ. ರಾಮಚಂದ್ರಪ್ಪ ಬಿನ್ ಬಿ.ಎಂ. ಕೃಷ್ಣಪ್ಪ | ಕೆ. ರಾಮಚಂದ್ರಪ್ಪ | 122/1 | 0-17 | - | 0-17 | 1-96 | ಭಾಗಾಯ್ತು | 121/2 | 77 | 90,91 | 96 |
| 6. | ಮನಮೋಹನ ಪ್ರಸಾದ್ ಬಿನ್ ಲೇಟ್ ಜೆ. ಕೃಷ್ಣಮೂರ್ತಿ ಪ್ರಸಾದ್, ಕೆ. ಮನಮೋಹನ ಪ್ರಸಾದ್ ಬಿನ್ ಲೇಟ್ ಜೆ. ಕೃಷ್ಣಮೂರ್ತಿ ಪ್ರಸಾದ್, ಕೆ. ಮನಮೋಹನ ಪ್ರಸಾದ್ ಬಿನ್ ಲೇಟ್ ಜೆ. ಕೃಷ್ಣಮೂರ್ತಿಪ್ರಸಾದ್, ಮನಮೋಹನ ಪ್ರಸಾದ್ ಬಿನ್ ಲೇಟ್ ಜೆ. ಕೃಷ್ಣಮೂರ್ತಿ ಪ್ರಸಾದ್ | | 122/2 | 0-09 | - | 0-09 | 1-04 | ಭಾಗಾಯ್ತು | 121 | 122/1 | 92 | 96 |
| | | | **ಒಟ್ಟು** | **3-11** | **0-12** | **2-39** | | | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಲೋಕನಾಥ್‌ರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ (ಕೈಅ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 386

## ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ

### ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು - 560 001

### ಪ್ರಕಟಣೆ

**ಸಂಖ್ಯೆ: ಕರಾಆ/ಆಡಳಿತ/01/2007, ದಿನಾಂಕ: 22ನೇ ಮಾರ್ಚ್ 2007**

**ವಿಷಯ:** ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 16(1ಎ) ರಡಿಯಲ್ಲಿ ರಾಜ್ಯ ಆಯೋಗದ ಸದಸ್ಯರ (ಮಹಿಳಾ) ಆಯ್ಕೆ ಬಗ್ಗೆ.

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಸದಸ್ಯರಾಗಿ (ಮಹಿಳಾ) ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ರಮಾ ಅನಂತ್ ಇವರ ಮೊದಲನೆ ಕಾಲಿಕ ಸೇವಾ ಅವಧಿಯ ದಿನಾಂಕ: 2.5.2002 ರಿಂದ ದಿನಾಂಕ: 1.5.2007ಕ್ಕೆ ಅಂತ್ಯವಾಗುವ ಹಿನ್ನೆಲೆಯಲ್ಲಿ ದಿನಾಂಕ: 2.5.2007 ರಿಂದ ಖಾಲಿ ಉಳಿಯುವ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಸದಸ್ಯರ (ಮಹಿಳಾ) ಸ್ಥಾನಕ್ಕೆ ಸೂಕ್ತರಾದವರನ್ನು ಆಯ್ಕೆ ಮಾಡುವ ಸಲುವಾಗಿ ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 16(1)(ಬಿ) ರನ್ವಯ ಮತ್ತು ಕಲಂ 16(3)ರ ಮೊದಲನೆ ಪರಂತುಕದನ್ವಯ ಅರ್ಹತೆಯನ್ನು ಹೊಂದಿರುವ ಅಭ್ಯರ್ಥಿಗಳಿಂದ ಅರ್ಜಿಯನ್ನು ಈ ಮೂಲಕ ಆಹ್ವಾನಿಸಲಾಗಿದೆ.

ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 16(3)ರ ಮೊದಲನೆ ಪರಂತುಕದನ್ವಯ ಹಾಲಿ ಸದಸ್ಯರಾಗಿ ಕಾರ್ಯನಿರ್ವಹಿಸುತ್ತಿರುವವರು ಕೂಡ ಎರಡನೇ ಅವಧಿಗೆ ಆಯ್ಕೆ ಬಯಸಿ ಅರ್ಜಿಯನ್ನು ಸಲ್ಲಿಸಬಹುದಾಗಿರುತ್ತದೆ.

ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 16(1)(ಬಿ) ರನ್ವಯ 35 ವರ್ಷ ವಯಸ್ಸಾಗಿರುವವರು, ಅಂಗೀಕೃತ ವಿಶ್ವವಿದ್ಯಾನಿಲಯದ ಪದವೀದರರಾಗಿರುವವರು ಮತ್ತು ಪ್ರಾಮಾಣಿಕತೆ ನಿಷ್ಠೆ ಮತ್ತು ದೃಢತೆಯನ್ನು ಹೊಂದಿರುವುದರ ಜೊತೆಗೆ ಅರ್ಥ ಶಾಸ್ತ್ರ, ಕಾನೂನು, ವಾಣಿಜ್ಯ ಲೆಕ್ಕ

ಶಾಸ್ತ್ರ, ಕೈಗಾರಿಕೆ, ಸಾರ್ವಜನಿಕ ಆಡಳಿತ ಮತ್ತು ವ್ಯವಹಾರಗಳು, ಇವುಗಲ್ಲಿ ಕನಿಷ್ಟ 10 ವರ್ಷಗಳ ಅನುಭವವನ್ನು ಹೊಂದಿರುವವರು ಯ್ಕೆ ಬಯಸಿ ಅರ್ಜಿಯನ್ನು ಸಲ್ಲಿಸಬಹುದಾಗಿರುತ್ತದೆ.

ನಿಗದಿತ ಅರ್ಜಿ ನಮೂನೆಯಲ್ಲಿ ಅಗತ್ಯ ದಾಖಲೆಗಳ ದೃಢೀಕೃತ ಪ್ರತಿಯೊಂದಿಗೆ ದಿನಾಂಕ: **5ನೇ ಮೇ 2007ರ ಸಂಜೆ 5-00 ಘಂಟೆಯೊಳಗಾಗಿ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು ಇಲ್ಲಿಗೆ ಸಲ್ಲಿಸುವುದು.** ಅರ್ಜಿದಾರರು ನಿಗದಿತ ನಮೂನೆಯಲ್ಲಿ ಸಂಪೂರ್ಣವಾಗಿ ಭರ್ತಿ ಮಾಡಿದ ಅರ್ಜಿಯನ್ನು ಹಾಗೂ ಅಗತ್ಯ ದಾಖಲೆಗಳ ಪ್ರತಿಗಳೊಂದಿಗೆ ಸೀಲ್ ಮಾಡಿದ ಲಕೋಟೆಯಲ್ಲಿರಿಸಿ, ಅಜಿ ಲಕೋಟೆಯ ಮೇಲೆ **"ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಸದಸ್ಯರ (ಮಹಿಳಾ) ಸ್ಥಾನಕ್ಕೆ ಅರ್ಜಿ" ಎಂದು ದಪ್ಪ ಅಕ್ಷರಗಳಲ್ಲಿ ಬರೆದು ಸಲ್ಲಿಸುವುದು.**

ಕರ್ನಾಟಕ ರಾಜ್ಯದಲ್ಲಿರುವ ರಾಜ್ಯ ಆಯೋಗ ಮತ್ತು ಎಲ್ಲಾ ಜಿಲ್ಲಾ ವೇದಿಕೆಗಳಲ್ಲಿ ಪ್ರತಿಯೊಂದು ಅರ್ಜಿ ರೂ.10-00 ರಂತೆ ಶುಲ್ಕವನ್ನು ಪಾವತಿ ಮಾಡಿ ಅರ್ಜಿ ನಮೂನೆಯನ್ನು ಪಡೆದುಕೊಳ್ಳಬಹುದಾಗಿರುತ್ತದೆ. ಹೀಗೆ ಸಂಗ್ರಹವಾದ ಶುಲ್ಕವನ್ನು, ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳಲ್ಲಿ ರಾಜ್ಯ ಲೆಕ್ಕ ಸ್ವೀಕೃತಿ ಶೀರ್ಷಿಕೆ ಸಂಖ್ಯೆ 1456-00-800-0-01 ಇದಕ್ಕೆ ಜಮಾ ಮಾಡುವುದು. ನಿಗದಿತ ಕಾಲಾವಧಿ ಮೀರಿ ಬರುವಂತಹ ಯಾವುದೇ ಅರ್ಜಿಗಳನ್ನು ರಾಜ್ಯ ಆಯೋಗವು ಸ್ವೀಕರಿಸುವುದಿಲ್ಲ.

**ನ್ಯಾಯಮೂರ್ತಿ ಚಂದ್ರಶೇಖರಯ್ಯ**
ಅಧ್ಯಕ್ಷರು,
ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,
ಬೆಂಗಳೂರು.

## ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ
## ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು - 560 001
## ಪ್ರಕಟಣೆ

**ಸಂಖ್ಯೆ: ಕರಾಆ/ಆಡಳಿತ/01/2007, ದಿನಾಂಕ: 17ನೇ ಮಾರ್ಚ್ 2007**

**ವಿಷಯ:** ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1ಎ) ರಡಿಯಲ್ಲಿ ಜಿಲ್ಲಾ ವೇದಿಕೆಯ ಅಧ್ಯಕ್ಷರ ಆಯ್ಕೆ ಬಗ್ಗೆ.

**ಉಲ್ಲೇಖ:** ಗ್ರಾಹಕ ಸಂರಕ್ಷಣಾ ಕಾಯ್ದೆ 1986 ಕಲಂ 10(1ಎ) ರಡಿಯಲ್ಲಿನ ಆಯ್ಕೆ ಸಮಿತಿಯ ದಿನಾಂಕ 12.3.2007ರ ನಡವಳಿ.

ಬಿಜಾಪುರ ಮತ್ತು ಬೆಂಗಳೂರು ನಗರ 2ನೇ ಅಪರ ಜಿಲ್ಲಾ ವೇದಿಕೆ ಅಧ್ಯಕ್ಷರ ಸ್ಥಾನಕ್ಕೆ ಸೂಕ್ತರಾದವರನ್ನು ಆಯ್ಕೆ ಮಾಡುವ ಸಲುವಾಗಿ ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1)(ಎ) ರನ್ವಯ ಜಿಲ್ಲಾ ನ್ಯಾಯಾಧೀಶರಾಗಿರುವವರು ಅಥವಾ ಜಿಲ್ಲಾ ನ್ಯಾಯಾಧೀಶರಾಗಿದ್ದರು ಅಥವಾ ಜಿಲ್ಲಾ ನ್ಯಾಯಾಧೀಶರಾಗಲು ಅರ್ಹರಿರುವವರಿಂದ ನಿಗದಿತ ಅರ್ಜಿ ನಮೂನೆಯಲ್ಲಿ ಅಗತ್ಯ ದಾಖಲೆಗಳೊಂದಿಗೆ ಅರ್ಜಿಗಳನ್ನು ಈ ಮೂಲಕ ಆಹ್ವಾನಿಸುತ್ತಾ, ನಿಗದಿತ ಅರ್ಜಿ ನಮೂನೆಗಳನ್ನು ಸಂಪೂರ್ಣವಾಗಿ ಭರ್ತಿ ಮಾಡಿ ಅಗತ್ಯ ದಾಖಲೆಗಳ ದೃಢೀಕೃತ ಪ್ರತಿಗಳೊಂದಿಗೆ ದಿನಾಂಕ:5.5.2007ರ ಸಂಜೆ 5-00 ಗಂಟೆಯೊಳಗಾಗಿ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು ಇಲ್ಲಿಗೆ ಸಲ್ಲಿಸುವುದು. ಹೀಗೆ ಸಲ್ಲಿಸುವಂತಹ ಅರ್ಜಿ ಲಕೋಟೆಯ ಮೇಲೆ "ಬಿಜಾಪುರ ಅಥವಾ ರಾಯಚೂರು ಅಥವಾ ಬೆಂಗಳೂರು ನಗರ 2ನೇ ಅಪರ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರ ಸ್ಥಾನಕ್ಕೆ ಅರ್ಜಿ" ಎಂದು ದಪ್ಪ ಅಕ್ಷರಗಳಲ್ಲಿ ಬರೆಯುವುದು.

ನಿಗದಿತ ಕಾಲಾವಧಿ ಮೀರಿ ಬರುವಂತಹ ಅರ್ಜಿಗಳನ್ನು ಯಾವುದೇ ಸಂದರ್ಭದಲ್ಲಿ ಸೀಕರಿಸಲಾಗದು. ಸೇವೆಯಲ್ಲಿರುವ ಜಿಲ್ಲಾ ನ್ಯಾಯಾಧೀಶರು ಜಿಲ್ಲಾ ವೇದಿಕೆಯ ಅಧ್ಯಕ್ಷರ ಸ್ಥಾನಕ್ಕೆ ಆಯ್ಕೆ ಬಯಸಿ ಅರ್ಜಿ ಸಲ್ಲಿಸುವುದಿದ್ದಲ್ಲಿ ಅಂತಹ ಅರ್ಜಿಗಳನ್ನು ತಮ್ಮ ಮೇಲಾಧಿಕಾರಿಗಳ ಮೂಲಕ ನಿಗದಿತ ಕಾಲಾಧಿಯೊಳಗೆ ಸಲ್ಲಿಸುವುದು.

ಕರ್ನಾಟಕ ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿರುವ ಮತ್ತು ಬೆಂಗಳೂರು ನಗರದಲ್ಲಿರುವ ಎಲ್ಲಾ ಜಿಲ್ಲಾ ವೇದಿಕೆಗಳಲ್ಲಿ ಪ್ರತಿಯೊಂದು ಅರ್ಜಿಗೆ ರೂ.10-00 ರಂತೆ ಶುಲ್ಕವನ್ನು ಪಾವತಿ ಮಾಡಿ ಅರ್ಜಿ ನಮೂನೆಯನ್ನು ಪಡೆದುಕೊಳ್ಳತಕ್ಕದ್ದು.

ಜಿಲ್ಲಾ ವೇದಿಕೆಯವರು ಅರ್ಜಿ ನಮೂನೆಯನ್ನು ನೀಡುವಾಗ ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1)(ಎ)ರನ್ವಯ ಅರ್ಹರಿರುವಂತಹವರಿಗೆ ಮಾತ್ರ ನಿಗದಿತ ಶುಲ್ಕವನ್ನು ಪಾವತಿಸಿಕೊಂಡು ನಿಗದಿತ ನಮೂನೆಯ ಜೆರಾಕ್ಸ್ ಪ್ರತಿಗಳನ್ನು ಅಭ್ಯರ್ಥಿಗಳಿಗೆ ಒದಗಿಸುವುದು. ಹೀಗೆ ಸಂಗ್ರಹವಾದ ಶುಲ್ಕವನ್ನು Consumer Protection Regulation 2005 ರ ಅನುಸಾರ ದೃಢೀಕೃತ ಪ್ರತಿಗಳನ್ನು ನೀಡುವಾಗ ಸಂಗ್ರಹವಾದ ಶುಲ್ಕವನ್ನು ಡಿಪಾಸಿಟ್ ಮಾಡುವ ರೀತಿಯಲ್ಲಿ ರಾಜ್ಯ ಲೆಕ್ಕ ಸ್ವೀಕೃತಿ ಶೀರ್ಷಿಕೆ ಸಂಖ್ಯೆ: 1456-00-800-0-01 ಇದಕ್ಕೆ ಜಮಾ ಮಾಡುವುದು.

**ನ್ಯಾಯಮೂರ್ತಿ ಚಂದ್ರಶೇಖರಯ್ಯ**
ಅಧ್ಯಕ್ಷರು,
ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,
ಬೆಂಗಳೂರು.

## ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ
## ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು - 560 001
## ಪ್ರಕಟಣೆ

**ಸಂಖ್ಯೆ: ಕರಾಆ/ಆಡಳಿತ/01/2007, ದಿನಾಂಕ: 12ನೇ ಮಾರ್ಚ್ 2007**

**ವಿಷಯ:** ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1ಎ) ರಡಿಯಲ್ಲಿ ಜಿಲ್ಲಾ ವೇದಿಕೆಯ ಸದಸ್ಯರ ಬಗ್ಗೆ.

ಬೆಂಗಳೂರು ನಗರ 4ನೇ ಅಪರ ಜಿಲ್ಲಾ ವೇದಿಕೆಯ ಇಬ್ಬರು ಸದಸ್ಯರ ಸ್ಥಾನವು ದಿನಾಂಕ: 1.9.2007ರ ಅಪರಾಹ್ನದಿಂದ, ಬೀದರ್ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ ಸ್ಥಾನವು ದಿನಾಂಕ: 15.7.2007ರ ಅಪರಾಹ್ನದಿಂದ, ಕೋಲಾರ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ ಸ್ಥಾನವು ದಿನಾಂಕ 14.7.2007ರ ಅಪರಾಹ್ನದಿಂದ, ಬೆಂಗಳೂರು ನಗರ 2ನೇ ಅಪರ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ

ಪರಿಹಾರ ವೇದಿಕೆಯ ಸದಸ್ಯರ ಸ್ಥಾನವು ದಿನಾಂಕ: 3.8.2007ರ ಅಪರಾಹ್ನದಿಂದ, ಉತ್ತರ ಕನ್ನಡ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಎರಡೂ ಸದಸ್ಯರ ಸ್ಥಾನ ಅನುಕ್ರಮವಾಗಿ ದಿನಾಂಕ: 10.7.2007 ಮತ್ತು ದಿನಾಂಕ 3.9.20076ರ ಅಪರಾಹ್ನದಿಂದ ಖಾಲಿಯಾಗುತ್ತಿರುವ ಹಿನ್ನೆಲೆಯಲ್ಲಿ ಸದರಿ ಸ್ಥಾನಗಳಿಗೆ ಸೂಕ್ತ ರಾದವರನ್ನು ಆಯ್ಕೆ ಮಾಡುವ ಸಲುವಾಗಿ ಗ್ರಾಹಕ ಸಂರಕ್ಷಣಾ ಕಾಯ್ದೆ 1986 ಕಲಂ 10(1)(ಬಿ) ರನ್ವಯ ಮತ್ತು ಕಲಂ 10(2)ರ ಪರಂತುಕದನ್ವಯ ಅರ್ಹತೆಯನ್ನು ಹೊಂದಿರುವಂತಹ ಅಭ್ಯರ್ಥಿಗಳಿಂದ ನಿಗದಿತ ಅಜಿ ನಮೂನೆಯಲ್ಲಿ ಅರ್ಜಿಯನ್ನು ಈ ಮೂಲಕ ಆಹ್ವಾನಿಸಲಾಗಿದೆ.

ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(20 ಮತ್ತು 2ರ ಪರಂತುಕದನ್ವಯ ಅರ್ಹತೆ ಹೊಂದಿರುವ, ಹಾಲಿ ಸೇವೆಯಲ್ಲಿರುವ ಜಿಲ್ಲಾ ವೇದಿಕೆಯ ಸದಸ್ಯರು ಎರಡನೇ ಅವಧಿಗೆ ಆಯ್ಕೆ ಬಯಸಿ ಅರ್ಜಿಯನ್ನು ಸಲ್ಲಿಸಬಹುದಾಗಿರುತ್ತದೆ.

ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1)(ಬಿ) ರನ್ವಯ 35 ವರ್ಷ ವಯಸ್ಸಾಗಿರುವವರು ಅಂಗೀಕೃತ ವಿಶ್ವವಿದ್ಯಾನಿಲಯದ ಪದವೀದರರಾಗಿರುವವರು ಪ್ರಾಮಾಣಿಕತೆ ನಿಷ್ಠೆ ಮತ್ತು ದೃಢತೆಯನ್ನು ಹೊಂದಿರುವುದರ ಜೊತೆಗೆ ಅರ್ಥಶಾಸ್ತ್ರ, ಕಾನೂನು, ವಾಣಿಜ್ಯ ಲೆಕ್ಕ ಶಾಸ್ತ್ರ, ಕೈಗಾರಿಕೆ, ಸಾರ್ವಜನಿಕ ವ್ಯವಹಾರಗಳು ಮತ್ತು ಸಾರ್ವಜನಿಕ ಆಡಳಿತ ಇವುಗಳಲ್ಲಿ ಕನಿಷ್ಟ 10 ವರ್ಷಗಳ ಅನುಭವವನ್ನು ಹೊಂದಿರುವವರು ಆಯ್ಕೆ ಬಯಸಿ ಅರ್ಜಿಯನ್ನು ಸಲ್ಲಿಸಬಹುದಾಗಿರುತ್ತದೆ.

ಕರ್ನಾಟಕ ರಾಜ್ಯದಲ್ಲಿರುವ ರಾಜ್ಯ ಆಯೋಗ ಮತ್ತು ಎಲ್ಲಾ ಜಿಲ್ಲಾ ವೇದಿಕೆಗಳಲ್ಲಿ ಪ್ರತಿಯೊಂದು ಅರ್ಜಿಗೆ ರೂ.10-00 ರಂತೆ ಶುಲ್ಕವನ್ನು ಪಾವತಿ ಮಾಡಿ ಅರ್ಜಿ ನಮೂನೆಯನ್ನು ಪಡೆದುಕೊಳ್ಳಬಹುದಾಗಿರುತ್ತದೆ. ಹೀಗೆ ಸಂಗ್ರಹವಾದ ಶುಲ್ಕವನ್ನು ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳಲ್ಲಿ ರಾಜ್ಯ ಲೆಕ್ಕ ಸ್ವೀಕೃತಿ ಶೀರ್ಷಿಕೆ ಸಂಖ್ಯೆ 1456-00-800-0-01 ಇದಕ್ಕೆ ಜಮಾ ಮಾಡುವುದು. ನಿಗದಿತ ಕಾಲಾವಧಿ ಮೀರಿ ಬರುವಂತಹ ಯಾವುದೇ ಅರ್ಜಿಗಳನ್ನು ರಾಜ್ಯ ಆಯೋಗವು ಸ್ವೀಕರಿಸುವುದಿಲ್ಲ.

ನಿಗದಿತ ಅರ್ಹತೆಯನ್ನು ಹೊಂದಿರುವವರು **ನಿಗದಿತ ಅರ್ಜಿ ನಮೂನೆಯಲ್ಲಿ ಅಗತ್ಯ ದಾಖಲೆಗಳ ದೃಢೀಕೃತ ಪ್ರತಿಯೊಂದಿಗೆ ದಿನಾಂಕ:5ನೇ ಮೇ 2007ರ ಸಂಜೆ 5-00 ಘಂಟೆಯೊಳಗಾಗಿ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು ಇಲ್ಲಿಗೆ ಸಲ್ಲಿಸುವುದು.** ಅರ್ಜಿದಾರರು ನಿಗದಿತ ನಮೂನೆಯಲ್ಲಿ ಸಂಪೂರ್ಣವಾಗಿ ಭರ್ತಿ ಮಾಡಿದ ಅರ್ಜಿಯ ಅಗತ್ಯ ದಾಲೆಗಳ ಪ್ರತಿಗಳೊಂದಿಗೆ ಸೀಲ್ ಮಾಡಿದ ಲಕೋಟೆಯಲ್ಲಿರಿಸಿ, ಅರ್ಜಿ ಲಕೋಟೆಯ ಮೇಲೆ **"(ಜಿಲ್ಲಾ ವೇದಿಕೆಯ ಹೆಸರು ಬರೆದು) ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ ಸ್ಥಾನಕ್ಕೆ ಅರ್ಜಿ" ಎಂದು ದಪ್ಪ ಅಕ್ಷರಗಳಲ್ಲಿ ಬರೆದು".** ಪ್ರತಿಯೊಂದು ಜಿಲ್ಲಾ ವೇದಿಕೆಯ ಸದಸ್ಯರ ಸ್ಥಾನಕ್ಕೆ ಪ್ರತ್ಯೇಕ ಅರ್ಜಿಯನ್ನು ಸಲ್ಲಿಸಬೇಕು.

**ನ್ಯಾಯಮೂರ್ತಿ ಚಂದ್ರಶೇಖರಯ್ಯ**
ಅಧ್ಯಕ್ಷರು,
ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,
ಬೆಂಗಳೂರು.

ಪಿ.ಆರ್. 398

**KARNATAKA STATE BAR COUNCIL, OLD K.G.I.D. BLDG., BANGALORE-1**
**NOTIFICATION NO. 4/2007 Dated : 4th March 2007**

As per Rule 12 of "The Karnataka State Bar Council (Election of Chairman) Rules 1978". it is declared that the following Member of the Council has been elected to the Office of the Chairman.

**CHAIRMAN**

| Sl. No. | Name of the Candidate | Address |
|---|---|---|
| 1. | DESAI RAJENDRA CHANDRASHEKAR | C-1, Casa Lavelle-3, 12/2, Lavelle Road, Near Rama Hotel, Bangalore-1<br>Ph: Off: 23361418<br>Res: 22226921<br>Mbl: 98440 46888 |

**S.V. PATIL**
RETURNING OFFICER,
KARNATAKA STATE BAR COUNCIL BANGALORE.

**KARNATAKA STATE BAR COUNCIL, OLD K.G.I.D. BUILDING, BANGALORE**

**S.V. PATIL**
**SECRETARY**

**NOTIFICATION NO. 3/2007, DATED 1ST MARCH, 2007**

NOTIFICATION UNDER RULE 8 OF CHAIRMAN AND VICE-CHAIRMAN ELECTION RULES.

Shri NARAYAN POOJARY. T. Adovate, 'Manasa', Nethravathi Layout, Kanakanady Post, Mangalore - 575 002 is declared elected unopposed as VICE-CHAIRMAN of the Karnataka State Bar Council.

PLACE : BANGALORE
DATED : 1.3.2007.
P.D. 43

**S.V. PATIL**
RETURNING OFFICER,
KARNATAKA STATE BAR COUNCIL BANGALORE.

## ಗೃಹ ಆಯುಕ್ತರವರ ಕಛೇರಿ, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು

### ಅಧಿಸೂಚನೆ

**ಸಂಖ್ಯೆ: ಕಗೃಮಂ/ಭೂಸ್ವಾವಿ. 65/2006-07 ದಿನಾಂಕ: 13ನೇ ಮಾರ್ಚ್ 2007**

ಸಂಖ್ಯೆ: ಕಗೃಮಂ/ಭೂಸ್ವಾವಿ. 65 /2006-07 ದಿನಾಂಕ:29.8.2006, 1961ನೇ ಸಾಲಿನ ಕರ್ನಾಟಕ ಭೂಸ್ವಾಧೀನ ಅಧಿನಿಯಮ 33ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ 4 (2) ರ ಪ್ರಕರಣದಿಂದ ವಿಹಿತವಾದ ಅಧಿಕಾರದಂತೆ ಗೃಹ ನಿರ್ಮಾಣ ಯೋಜನೆಗಾಗಿ ಜಮೀನುಗಳನ್ನು ಸಂಗ್ರಹಿಸುವ ಉದ್ದೇಶಕ್ಕೆ ಹಾಸನ ಜಿಲ್ಲೆ, ಹೊಳೇನರಸೀಪುರ ತಾಲ್ಲೂಕು, ಕಸಬ ಹೋಬಳಿ, ಸೂರನಹಳ್ಳಿ, ದಕ್ಷಿಣ ನಾಲಾ ಅಮಾನಿಹಿರಿಕೆರೆ, ಹೊಳೆನರಸೀಪುರ ಗ್ರಾಮದ ಹಲವು ಸರ್ವೆ ನಂಬರುಗಳ ಜಮೀನುಗಳು ಬೇಕಾಗಬಹುದೆಂದು ದಿನಾಂಕ:14.9.2006 ರಂದು ಕರ್ನಾಟಕ ರಾಜ್ಯ ಪತ್ರ ಭಾಗ-3 ಪುಟ ಸಂಖ್ಯೆ:2188 ರಿಂದ 2219ರಲ್ಲಿ ಹೊರಡಿಸಿದ್ದ, ಅಧಿನಿಯಮ 4(1)ರ ಅಧಿಸೂಚನೆಯ ಸಂಖ್ಯೆ:ಕಗೃಮಂ /ಭೂಸ್ವಾವಿ. 65/ 2006-07 ದಿನಾಂಕ:14.9.2006 ರಲ್ಲಿ ಅಧಿಸೂಚಿಸಿರುವ ಗ್ರಾಮಗಳ ಪೈಕಿ ಸೂರನಹಳ್ಳಿ ಮತ್ತು ಅಮಾನಿಹಿರಿಕೆರೆ ಗ್ರಾಮದ ಜಮೀನುಗಳಿಗೆ ಸಂಬಂಧಿಸಿದಂತೆ ಅಧಿಸೂಚನೆಯನ್ನು ಹಿಂದಕ್ಕೆ ಪಡೆಯಲಾಗಿದೆ.

ಗೃಹ ಆಯುಕ್ತರು,
ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

ಪಿ.ಡಿ. 32

## ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ವಿಷಯ:** ಸಮಾಪನಾ ಆದೇಶಿತ ಸಣ್ಣ ನೀರಾವರಿ ನೀರು ಬಳಕೆದಾರರ ಸ.ಸಂ.ನಿ. ನೊಣಬೂರು ತೀರ್ಥಹಳ್ಳಿ ತಾ: ಇದರ ನೊಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:**
1. ಶಿವಮೊಗ್ಗ ಜಿಲ್ಲಾ ಸ.ಸಂ.ಗಳ ಉಪನಿಬಂಧಕರು, ಶಿವಮೊಗ್ಗರವರ ಆದೇಶ ಸಂ:ಡಿಆರ್ ಎಸ್:ಸಮಾಪನೆ:ಡಿಎಲ್ಎಸ್ :38:2005-06
2. ಸ.ಸಂ.ಗಳ ಸ.ನಿ.ಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ, ಇವರ ಪತ್ರಸಂ.ಸನಿ-24:ಸಮಾಪನೆ: ಸಿಆರ್-12:06-07 :ದಿನಾಂಕ:25.1.2007

**ಪ್ರಸ್ತಾವನೆ:**

ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ನೊಣನೂರು ತೀರ್ಥಹಳ್ಳಿ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಾರ್ಯಾಲಯದಲ್ಲಿ ಕ್ರ.ಸಂ.ಎಆರ್-24:ನೊಂದಣಿ:ಆರ್‌ಜಿಎಸ್ :200:2866:2000-01 :ರಿ:13-2-01 ರಲ್ಲಿ ನೊಂದಣಿಯಾಗಿದ್ದು, ಇವರ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ವ್ಯಾಪ್ತಿಯುಳ್ಳದ್ದಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ ಹಿನ್ನಲೆಯಲ್ಲಿ ಉಲ್ಲೇಖ(1)ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ತೀರ್ಥಹಳ್ಳಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕಗೊಳಿಸಲಾಗಿದೆ. ಸದರಿ ಸಮಾಪನಾಧಿಕಾರಿಯವರು ದಿನಾಂಕ:15.6.2006 ರಂದು ಅಧಿಕಾರ ವಹಿಸಿಕೊಂಡು ಚಾರ್ಜ್ ಪಡೆದು, ಆಧ್ಯತಾಪಟ್ಟಿಯ ಅನುಮೋದನೆ ಪಡೆದು, ಚರಾಸ್ತಿ ವಿಲೇವಾರಿ ಮಾಡಿ ಲೆಕ್ಕಪತ್ರಗಳನ್ನು 2004-05ನೇ ಸಾಲಿನವರೆಗೆ ಆಡಿಟ್ ಮಾಡಿಸಿರುತ್ತಾರೆ. ದಿನಾಂಕ:1.4.05 ರಿಂದ 31.12.2006 ರವರೆಗಿನ ಜಮಾ ಖರ್ಚು, ಲಾಭ ನಷ್ಟದ ತಃಖ್ತೆಯನ್ನು ತಯಾರಿಸಿ, ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಸಮಾಪನಾಧಿಕಾರಿಯವರು ದಿನಾಂಕ:5.1.2007 ರಂದು ಅಂತಿಮ ಸಭೆ ನಡೆಸಿದ್ದು, ಈ ಸಂಘದಲ್ಲಿ ಜವಾಬ್ದಾರಿ ತೀರುವಳಿ ಆದನಂತರ ಸಂಘದ ನೊಂದಣಿಯನ್ನು ರದ್ದುಪಡಿಸಿ ಸಭೆಯಲ್ಲಿ ನಿರ್ಣಯಿಸಿ ನಡವಳಿಕೆ ಸಲ್ಲಿಸಿರುತ್ತಾರೆ, ಉಲ್ಲೇಖ(2)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ-ವಿಭಾಗ, ಶಿವಮೊಗ್ಗ ಇವರು ಪ್ರಸ್ತಾವನೆಯನ್ನು ಪರಿಶೀಲಿಸಿ ನೊಂದಣಿ ರದ್ಧತಿಗೆ ಶಿಫಾರಸ್ಸು ಮಾಡಿರುತ್ತಾರೆ, ಸಮಾಪನಾಧಿಕಾರಿಯವರ ನಿರ್ಣಯ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗರವರ ಶಿಫಾರಸ್ಸು ಆಧಾರಿತವಾಗಿ ನೊಂದಣಿ ರದ್ದತಿಗೆ ಈ ಕೆಳಕಂಡಂತೆ ಆದೇಶಿಸಿದೆ.

### ಆದೇಶ

**ಕ್ರ.ಸಂ.ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್:38:05-06 2654 ದಿನಾಂಕ: 31ನೇ ಜನವರಿ 2007**

ಕರ್ನಾಟಕ ಸಹಕಾರ ಸಂಘಗಳ 1959ರ ಕಲಂ 75 ರನ್ವಯ ಮತ್ತುಕರ್ನಾಟಕ ಸರ್ಕಾರದ ಅಧಿಸೂಚನೆ ಸಂ:ಸಿಎಂಡಬ್ಲೂ:69:ಸಿಎಲ್ಎಂ: 2001:ದಿನಾಂಕ:21-11-2001ರಲ್ಲಿ ದತ್ತವಾಗಿರುವ ಅಧಿಕಾರ ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರಾದ ನಾನು ಸಮಾಪನಾದೇಶಿತ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ನೊಣಬೂರು, ತೀರ್ಥಹಳ್ಳಿ ತಾ: ಇದರ ನೊಂದಣಿ ಸಂ;ಎಆರ್-24 :ನೊಂದಣಿ ಆರ್‌ಬಿಎಸ್ :200:2866:2000-01 ದಿನಾಂಕ:13.2.01 ಇದನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವ ಕಳೆದುಕೊಂಡಿದೆ. ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು ಮೂರು ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ :31.1.2007 ರಂದು ನನ್ನ ಸ್ವ ಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

**ಕೆ. ಈಶ್ವರಸ್ವಾಮಿ**
ಸಹಕಾರ ಸಂಘಗಳ ಉಪ-ನಿಬಂಧಕರು,
ಶಿವಮೊಗ್ಗ ಜಿಲ್ಲೆ ಶಿವಮೊಗ್ಗ.

ಪಿ.ಆರ್. 287

## ಸಹಕಾರ ಸಂಘಗಳ ಉಪ-ನಿಬಂಧಕರು ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ವಿಷಯ:** ಸಮಾಪನಾ ಆದೇಶಿತ ತುಮರಿ ಹಾಲು ಉತ್ಪಾದಕರ ಸಹಕಾರ ಸಂಘ ನಿ:ಸಾಗರ ತಾಲ್ಲೂಕು ಇದರ ನೊಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1. ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗರವರ ಆದೇಶ ನಂ:ಡಿಆರ್ಎಸ್: ಸಮಾಪನೆ:ಡಿಎಲ್ಎಸ್ :59:04–05 ದಿನಾಂಕ: 30.9.2004.

2. ಸಸಹಾರ ಸಂಘಗಳ ಸ.ನಿ.ಕರು, ಸಾಗರ ಉಪವಿಭಾಗ, ಸಾಗರ,ರವರ ಪತ್ರಸಂ.ಸನಿ–25:ಸಮಾಪನೆ:169: 2006–07: ದಿನಾಂಕ:27.1.2007

**ಪ್ರಸ್ತಾವನೆ:**

ತುಮರಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಸಾಗರ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರ ಉಪ–ವಿಭಾಗ, ಇವರ ಕಾರ್ಯಾಯಲಯದಲ್ಲಿ ನೊಂದಣಿ ಸಂ.ಎಆರ್–25:ನೊಂದಣಿ:19:25430:98–99:ದಿನಾಂಕ:25.2.99ರಲ್ಲಿ ನೊಂದಣಿಯಾಗಿದ್ದು, ಇವರ ಕಾರ್ಯವ್ಯಾಪ್ತಿಯು ತಾಲ್ಲೂಕಿಗಿಂತ ಕಡಿಮೆ ಇರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ ಹಿನ್ನಲೆಯಲ್ಲಿ ಉಲ್ಲೇಖ(1)ರ ಆದೇಶದಲ್ಲಿ ಸಮಾಪನೆಗೊಳಿಸಿ ಮಾರಾಟಾಧಿಕಾರಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೆರಿ, ಸಾಗರ, ಇವರನ್ನು ಸಮಾಪನಾಧಿಕಾರಿಯಾಗಿ ನೇಮಕಗೊಳಿಸಲಾಗಿದೆ ಸದರಿ ಸಮಾಪನಾಧಿಕಾರಿಯವರು ದಿನಾಂಕ:22.12.2004 ರಂದು ಅಧಿಕಾರ ವಹಿಸಿಕೊಂಡು ಪ್ರಭಾರ ಪಡೆದು ಆದ್ಯತಾಪಟ್ಟಿಯ ಅನುಮೋದನೆ ಪಡೆದು ಚರಾಸ್ತಿ ವಿಲೇವಾರಿ ಮಾಡಿರುತ್ತಾರೆ.ಸಂಘದಲ್ಲಿ 1999–2000ದವರೆಗೆ ಆಡಿಟ್ ಆಗಿರುತ್ತದೆ, ತದನಂತರ, 2000–01, 2001–02 2002–03 ರವರೆಗೆ ವ್ಯವಹಾರ ನಡೆದಿದ್ದು, ಜಮಾ–ಖರ್ಚು, ಆಸ್ತಿ–ಜವಾಬ್ದಾರಿ ತಃಖ್ತೆಯನ್ನು ತಯಾರಿಸಲಾಗಿರುತ್ತದೆ. ತದನಂತರ 2003–04ನೇ ಸಾಲಿನಿಂದ ವ್ಯವಹಾರ ಆಗಿರುವುದಿಲ್ಲ. ಸಂಘದ ಲೆಕ್ಕಪರಿಶೋಧನಾ ವರದಿ ಹಾಗೂ ನಂತರದ ಆಸ್ತಿ–ಜವಾಬ್ದಾರಿ ತಃಖ್ತೆಯನ್ನು ಆಧರಿಸಿ ಜವಾಬ್ದಾರಿಯನ್ನು ಶೂನ್ಯಗೊಳಿಸಿ ದಿನಾಂಕ:24,1.2007 ಕ್ಕೆ ಇದ್ದಂತೆ ಆಸ್ತಿ–ಜವಾಬ್ದಾರಿಯಶೂನ್ಯ ತಃಖ್ತೆಯನ್ನು ತಯಾರಿಸಿ ನೊಂದಣಿ ರದ್ಧತಿಗಾಗಿ ದಿನಾಂಕ 24.1.2007 ರಂದು ಸಮಾಪನಾಧಿಕಾರಿಯವರು ಅಂತಿಮ ಸಭೆ ನಡೆಸಿ, ಈ ಸಂಘದಲ್ಲಿ ಜವಾಬ್ದಾರಿ ತೀರುವಳಿಯಾದ ನಂತರ ಸಂಘದ ನೊಂದಣಿಯನ್ನು ರದ್ದುಪಡಿಸಲು ಈ ಸಭೆಯಲ್ಲಿ ನಿರ್ಣಯಿಸಿ ನಡವಳಿಕೆ ಸಲ್ಲಿಸಿರುತ್ತಾರೆ. ಉಲ್ಲೇಖ (2)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ–ವಿಭಾಗ, ಸಾಗರ ಇವರು ಪ್ರಸ್ತಾವನೆಯನ್ನು ಪರಿಶೀಲಿಸಿ ನೊಂದಣಿ ರದ್ದತಿಗೆ ಶೀಫಾರಸ್ಸು ಮಾಡಿರುತ್ತಾರೆ. ಸಮಾಪನಾಧಿಕಾರಿಯವರ ನಿರ್ಣಯ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ–ವಿಭಾಗ, ಸಾಗರ, ಇವರ ಶೀಫಾರಸ್ಸಿನ ಆಧಾರಿತವಾಗಿ ನೊಂದಣಿ ರದ್ದತಿಗೆ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ನ.ಡಿಆರ್ಎಸ್:ಸಮಾಪನೆ:59:ಡಿಎಲ್ಎಸ್::04–05 2661 ದಿನಾಂಕ: 31ನೇ ಜನವರಿ 2007**

ಕರ್ನಾಟಕ ಸಹಕಾರ ಸಂಘಗಳ1959 ರ ಕಲಂ 75 ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂ:ಸಿಎಂಡಬ್ಲೂ:69:ಸಿಎಲ್ಎಂ: 2001:ದಿನಾಂಕ:21–11–2001ರಲ್ಲಿ ದತ್ತವಾಗಿರುವ ಅಧಿಕಾರ ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ–ನಿಬಂಧಕರು ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನಾ ಆದೇಶಿತ ತುಮರಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಸಾಗರ ತಾ: ಇದರ ನೊಂದಣಿ ಕ್ರ.ಸಂ;ಎಆರ್–25: ಆರ್ಜಿಎಸ್:19:25430:98–99 ದಿನಾಂಕ:25.2.1999 ಇದನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವ ಕಳೆದುಕೊಂಡಿದೆ. ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ (ಮೂರು ವರ್ಷಗಳ) ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ–ವಿಭಾಗ, ಸಾಗರ, ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ :31.1.2007 ರಂದು ನನ್ನ ಸ್ವ ಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

**ಕೆ. ಈಶ್ವರಸ್ವಾಮಿ**
ಸಹಕಾರ ಸಂಘಗಳ ಉಪ–ನಿಬಂಧಕರು,
ಶಿವಮೊಗ್ಗ ಜಿಲ್ಲೆ ಶಿವಮೊಗ್ಗ.

ಪಿ.ಆರ್. 288

## ಸಹಕಾರ ಸಂಘಗಳ ಉಪ–ನಿಬಂಧಕ ರವರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ವಿಷಯ:** ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿ: ಹೊಸಹಳ್ಳಿ ತೀರ್ಥಹಳ್ಳಿ ತಾಲ್ಲೂಕು ಇದರ ನೊಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1. ಸ.ಸಂ.ಗಳ ಉಪ–ನಿಬಂಧಕರು, ಶಿವಮೊಗ್ಗ ಜಿಲ್ಲೆ ಇವರ ಆದೇಶ ನಂ:ಡಿಆರ್ ಎಸ್:ಸಮಾಪನೆ: ಡಿಎಲ್ಎಸ್ :28: 2005–06 ದಿನಾಂಕ: 29.6.2005.

2. ಸ.ಸಂ.ಗಳ ಸ.ನಿ.ಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗರವರ ಪತ್ರ ನಂ..ಎ.ಆರ್–25: ಸಮಾಪನೆ:ಸಿಆರ್ 46: 2005–06: ದಿನಾಂಕ:29.1.2007

**ಪ್ರಸ್ತಾವನೆ:**

ಹೊಸಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ತೀರ್ಥಹಳ್ಳಿ ತಾ: ಶಿವಮೊಗ್ಗ ಜಿಲ್ಲೆ, ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಶಿವಮೊಗ್ಗ ಉಪ–ವಿಭಾಗ, ಶಿವಮೊಗ್ಗ,ಇವರ ಕಾರ್ಯಾಲಯದಲ್ಲಿ ನೊಂದಣಿ ಸಂ.ಸನಿ: ಮಾರಾಟ:ನೊಂದಣಿ:1741:1990–91:ದಿನಾಂಕ:18.2.1991ರಲ್ಲಿ ನೊಂದಣಿಯಾಗಿದ್ದು, ಇವರ ಕಾರ್ಯವ್ಯಾಪ್ತಿಯು ತೀರ್ಥಹಳ್ಳಿ

ತಾಲ್ಲೂಕಿನ ಒಂದು ಭಾಗವಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾವನ್ನು ಸ್ಥಗಿತಗೊಳಿಸಿದ ಹಿನ್ನಲೆಯಲ್ಲಿ ಉಲ್ಲೇಖ(1)ರ ಆದೇಶದಲ್ಲಿ ಸಮಾಪನೆಗೊಳಿಸಲಾಗಿದೆ, ಸಹಕಾರ ಅಭಿವೃದ್ಧಿ ಅಧಿಕಾರಿ, ತೀರ್ಥಹಳ್ಳಿ, ಇವರನ್ನು ಸಮಾಪನಾಧಿಕಾರಿಯಾಗಿ ನೇಮಕಗೊಳಿಸಲಾಗಿದೆ ಸದರಿ ಸಮಾಪನಾಧಿಕಾರಿಯವರು ದಿನಾಂಕ:1.9.2005 ರಂದು ಅಧಿಕಾರ ವಹಿಸಿಕೊಂಡು ಚಾರ್ಜ್ ಪಡೆದು ಆದ್ಯತಾಪಟ್ಟಿಯ ಅನುಮೋದನೆ ಪಡೆದು ಚರಾಸ್ತಿಯನ್ನು ವಿಲೇವಾರಿ ಮಾಡಿ, ಲೆಕ್ಕಪತ್ರಗಳನ್ನು 2004-05ನೇ ಸಾಲಿನವರೆಗೆ ಆಡಿಟ್ ಮಾಡಿಸಿರುತ್ತಾರೆ.ದಿನಾಂಕ:1.4.2005 ರಿಂದ 31.3.2006 ರವರೆಗಿನ ತಾತ್ಕಾಲಿಕ ಜಮಾ-ಖರ್ಚು, ಲಾಭ-ನಷ್ಟ ತಃಖ್ತೆಯನ್ನು ತಯಾರಿಸಿ ದಿನಾಂಕ:31.3.2006ಕ್ಕೆ ಇದ್ದಂತೆ ಆಸ್ತಿ-ಜವಾಬ್ದಾರಿ ತಃಖ್ತೆಯನ್ನು ಶೂನ್ಯಗೊಳಿಸಿರುತ್ತಾರೆ. ನಂತರ ಸಮಾಪನಾಧಿಕಾರಿಗಳು ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇವಾರಿ ಮಾಡಲು ತೀರ್ಮಾನಿಸಿದಂತೆ ಸಮಾಪನೆಗೊಂಡ ಈ ಸಂಘದ ಪೂರ್ಣ ಜವಾಬ್ದಾರಿಗಳನ್ನು ತೀರುವಳಿ ಮಾಡಿದ ನಂತರ ಹೆಚ್ಚುವರಿಯಾಗಿ ಉಳಿದ ರೂ.54728-00ಗಳನ್ನು ಡಿ.ಡಿ.ನಂ.861346, ದಿನಾಂಕ:17.11.06 ಮತ್ತು ಡಿ.ಡಿ.ನಂ. 855933, ದಿನಾಂಕ:19.9.2006 ರಂತೆ ಸಹಕಾರ ಅಭಿವೃದ್ಧಿ ಖಾತೆ ಸಂ.9368ಕ್ಕೆ ಜಮೆ ನೀಡಿರುತ್ತಾರೆ. ಸದರಿ ಡಿ.ಡಿ.ಗಳನ್ನು ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್, ಬೆಂಗಳೂರಿಗೆ ಕಳುಹಿಸಿದ್ದು ಅಂಚೆ ದೃಢೀಕರಣ ನೀಡಿರುತ್ತಾರೆ. ಹಾಗೂ ಈ ಸಂಘದ ನೊಂದಣಿಯನ್ನು ರದ್ದುಪಡಿಸಲು ಸಭೆಯಲ್ಲಿ ನಿರ್ಣಯಿಸಿದ ನಡವಳಿಕೆಯನ್ನು ಸಲ್ಲಿಸಿರುತ್ತಾರೆ. ಉಲ್ಲೇಖ (2)ರಲ್ಲಿಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ-ವಿಭಾಗ, ಶಿವಮೊಗ್ಗ ಇವರು ಪ್ರಸ್ತಾವನೆಯನ್ನು ಪರಿಶೀಲಿಸಿ ನೊಂದಣಿ ರದ್ದತಿಗೆ ಶಿಫಾರಸ್ಸ ಮಾಡಿರುತ್ತಾರೆ. ಸಮಾಪನಾಧಿಕಾರಿಯವರ ನಿರ್ಣಯ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಇವರ ಶಿಫಾರಸ್ಸು ಆಧಾರಿತವಾಗಿ ನೊಂದಣಿ ರದ್ದತಿಗೆ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ಕ್ರ.ಸಂ.ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್:28:2005-06 2655 ದಿನಾಂಕ: 31ನೇ ಜನವರಿ 2007**

ಕರ್ನಾಟಕ ಸಹಕಾರ ಸಂಘಗಳ1959 ರ ಕಲಂ 75 ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂ:ಸಿಎಂಡಬ್ಲೂ:69:ಸಿಎಲ್‌ಎಂ:2001:ದಿನಾಂಕ:21-11-2001ರಲ್ಲಿ ದತ್ತವಾಗಿರುವ ಅಧಿಕಾರ ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ಆದ ನಾನು ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹೊಸಹಳ್ಳಿ, ತೀರ್ಥಹಳ್ಳಿ ತಾ: ಇದರ ನೊಂದಣಿ ಸಂಖ್ಯೆ:ಸಮಾಪನೆ:ಡಿಎಲ್‌ಎಸ್: 28:2005-06:479: ದಿನಾಂಕ:29.6.2005 ಇದನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವ ಕಳೆದುಕೊಂಡಿದೆ. ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ-ವಿಭಾಗ, ಶಿವಮೊಗ್ಗ, ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ :31.1.2007 ರಂದು ನನ್ನ ಸ್ವ ಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

**ಕೆ. ಈಶ್ವರಸ್ವಾಮಿ**
ಸಹಕಾರ ಸಂಘಗಳ ಉಪ-ನಿಬಂಧಕರು,
ಶಿವಮೊಗ್ಗ ಜಿಲ್ಲೆ ಶಿವಮೊಗ್ಗ.

ಪಿ.ಆರ್. 289

## ಆಯುಕ್ತರು ಕಬ್ಬು ಅಭಿವೃದಿ ಹಾಗೂ ಸಕ್ಕರೆ ನಿರ್ದೇಶಕರ ಕಛೇರಿ, ಬೆಂಗಳೂರು.

**ಸಂ.ಡಿಎಸ್‌ಕೆ/ಇಎಸ್‌ಟಿಎಸ್/ಎಲ್‌ಕ್ಯೂಡಿ/53/2006-07 ದಿನಾಂಕ:28ನೇ ಫೆಬ್ರವರಿ 2007**

**ವಿಷಯ:** ಶ್ರೀ ಭೀಮಾಶಂಕರ್ ಸಹಕಾರಿ ಸಕ್ಕರೆ ಕಾರ್ಖಾನೆ (ನಿ), ಇಂಡಿ, ಸಿಂಧಗಿ, (ಮರಗೂರು) ಬಿಜಾಪುರ ಜಿಲ್ಲೆ ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 ರಡಿ ಸಮಾಪನೆಗೊಳಿಸಿ ಸಮಾಪನಾಧಿಕಾರಿಗಳನ್ನು ನೇಮಿಸುವ ಬಗ್ಗೆ.

**ಉಲ್ಲೇಖ:**
1. ಕಾರ್ಖಾನೆಯ ಅಧ್ಯಕ್ಷರ ಪತ್ರ ಸಂ.ಬಿಎಸ್‌ಎಸ್‌ಕೆ /ಪಾಲಿಕಂ /ಪ್ರಸ್ತಾವನೆ/ 2006-07, ದಿನಾಂಕ: 25.10.2006.
2. ಸರ್ಕಾರದ ಪತ್ರ ಸಂ.ಸಇ /27/ಸಸಕಾ /2006-07, ದಿನಾಂಕ:15.12.2006.
3 ಕಾರ್ಖಾನೆಯ ಪತ್ರ ಸಂ. ಬಿಎಸ್‌ಎಸ್‌ಕೆ /ಮಾ.ಸ /06-07/120, ದಿನಾಂಕ:7.10.2006.
4 ಕಾರ್ಖಾನೆಯ ಅಧ್ಯಕ್ಷರ ಪತ್ರ ಸಂ.ಬಿಎಸ್‌ಎಸ್‌ಕೆ /ಪಾಲಿಕಂ/ಪರಿವರ್ತನೆ 148/06-07, ದಿನಾಂಕ: 14.2.2007.
5 ಕಾರ್ಖಾನೆಯ ಪತ್ರ ಸಂ.ಬಿಎಸ್‌ಎಸ್‌ಕೆ/ಪಾಲಿಕಂ/ಪರಿವರ್ತನೆ/149 ದಿನಾಂಕ:20.2.2007

**ಪ್ರಸ್ತಾವನೆ:**

ಶ್ರೀ ಭೀಮಾಶಂಕರ್ ಸಹಕಾರಿ ಸಕ್ಕರೆ ಕಾರ್ಖಾನೆ (ನಿ), ಇಂಡಿ, ಸಿಂಧಗಿ (ಮರಗೂರು) ಬಿಜಾಪುರ ಜಿಲ್ಲೆ ಇದು ನಿಂದಣಿ ಸಂಖ್ಯೆ: DSK/10/82-83, ದಿನಾಂಕ:20.4.1983 ರನ್ವಯ ನೊಂದಣಿಯಾಗಿದ್ದು ಭಾರತ ಸರ್ಕಾರದ ಕೈಗಾರಿಕಾ ಇಲಾಖೆಯಿಂದ ನಂ LI /174, ದಿನಾಂಕ :23.3.1994 ರನ್ವಯ ದಿನ ಒಂದಕ್ಕೆ 2500 MT ಕಬ್ಬು ನುರಿಸಿ ಸಕ್ಕರೆ ಉತ್ಪಾದನೆ ಮಾಡಲು ಲೈಸೆನ್ಸ್ ಪಡೆದುಕೊಂಡಿರುತ್ತೆ.

ಈ ಕಾರ್ಖಾನೆಯ ಯೋಜನಾ ಗಾತ್ರ ರೂ. 46.90 ಕೋಟಿಗಳಿದ್ದು, ರಾಜ್ಯ ಸರ್ಕಾರ ದಿನಾಂಕ:22.4.1999ರಲ್ಲಿ ಅನುಮೋದನೆ ನೀಡಿರುತ್ತೆ. ಕಾರ್ಖಾನೆಯ ಅನುಷ್ಠಾನದಲ್ಲಿ ಬಹಳಷ್ಟು ವಿಳಂಬವಾಗಿರುವುದರಿಂದ ಇನ್ನೂ ಅಂದಾಜು ರೂ. 15.00 ಕೋಟಿಗಳ ಯೋಜನಾ ವೆಚ್ಚ ಜಾಸ್ತಿಯಾಗುವುದಾಗಿ ಅಂದಾಜಿಸಲಾಗಿದೆ. ಸರ್ಕಾರ ಇವರಿಗೆ ರೂ. 8.20. ಕೋಟಿಗಳಷ್ಟು

ಶೇರು ಬಂಡವಾಳವಾಗಿ ನೀಡಿರುತ್ತೆ. ಕಾರ್ಖಾನೆಯು ಅವಧಿ ಸಾಲ ರೂ.28.14. ಕೋಟಿ ಸಂಗ್ರಹಿಸಬೇಕಾಗಿದ್ದು, ಪೈಕಿ ರೂ. 19.25 ಕೋಟಿ NCDCಯಿಂದ ಪಡೆಯಬೇಕಾಗಿರುತ್ತೆ. ಇದಕ್ಕೆ ಆರ್ಥಿಕ ಇಲಾಖೆಯು ಒಪ್ಪದೆ ಸಕ್ಕರೆ ಕಾರ್ಖಾನೆಯೇ ನೇರವಾಗಿ NCDCಯಿಂದ ಪಡೆಯಬಹುದೆಂಬ ಅಭಿಪ್ರಾಯ ವ್ಯಕ್ತಪಡಿಸಿರುತ್ತೆ.

ದಿನಾಂಕ:6.6.2006 ರಂದು ಸನ್ಮಾನ್ಯ ಕಂದಾಯ ಹಾಗೂ ಸಕ್ಕರೆ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಕಾರ್ಖಾನೆಯ ಯೋಜನಾ ವೆಚ್ಚ ರೂ.60.00 ಕೋಟಿ ಆಗುತ್ತಿದ್ದು, ಅವಧಿ ಸಾಲ ರೂ. 28.14 ಕೋಟಿ NCDC ಹಾಗೂ ಬ್ಯಾಂಕುಗಳಿಂದ ಪಡೆದರೂ ಸಹ ರೂ.15.00 ಕೋಟಿ ಹೆಚ್ಚಿನ ಬಂಡವಾಳವನ್ನು ತೊಡಗಿಸದೆ ಇದ್ದರೆ ಸಕ್ಕರೆ ಕಾರ್ಖಾನೆ ಸ್ಥಾಪನೆಯಾಗುವುದಿಲ್ಲವಾದ್ದರಿಂದ ಆಡಳಿತ ಮಂಡಳಿಯವರು ಕಾರ್ಖಾನೆಯನ್ನು ಸಹಕಾರಿ ಕ್ಷೇತ್ರದಲ್ಲಿ ಪೂರ್ಣಗೊಳಿಸುವ ಬಗ್ಗೆ ಅಥವಾ ಈಗಿರುವ ರೈತ ಸದಸ್ಯರಿಂದ ಖಾಸಗಿ ಕಾರ್ಖಾನೆಯಾಗಿ ಪರಿವರ್ತಿಸಿಕೊಳ್ಳುವ ಕುರಿತಂತೆ ಸೂಕ್ತ ಪ್ರಸ್ತಾವೆ ಕಳುಹಿಸಿದಲ್ಲಿ ಪರಿಶೀಲಿಸಲಾಗುವುದೆಂದು ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ.

ದಿನಾಂಕ:25.9.2006ರಂದು ನಡೆದ ಕಾರ್ಖಾನೆಯ 2004-05 ಮತ್ತು 2005-06ನೇ ಸಾಲಿನ ವಾರ್ಷಿಕ ಮಹಾ ಸಭೆಯಲ್ಲಿ ವಿಷಯ ಸಂಖ್ಯೆ-9 ರನ್ವಯ ಕಾರ್ಖಾನೆಯನ್ನು ಪಬ್ಲಿಕ್ ಲಿಕಂ ಆಗಿ ಪರಿವರ್ತನೆ ಮಾಡುವ ಬಗ್ಗೆ ನಿರ್ಣಯ ಕೈಗೊಂಡಿರುತ್ತೆ. ಸೆಪ್ಟೆಂಬರ್ 2006 ರ ಅಂತ್ಯಕ್ಕೆ 16047 ರೈತರು ಕಾರ್ಖಾನೆಯ A ಮತ್ತು B ವರ್ಗದ ಸದಸ್ಯರಾಗಿದ್ದು, ಅವರೆಲ್ಲರನ್ನು ಪಬ್ಲಿಕ್ ಲಿಕಂ ಆಗಿ ಪರಿವರ್ತನೆಯಾದಲ್ಲಿ ಅವರನ್ನು ಸದಸ್ಯರಾಗಿ ಮುಂದುವರೆಸುವುದಾಗಿ ಹಾಗೂ ಎಲ್ಲಾ ರೈತ ಸದಸ್ಯರನ್ನು ಕಂಪೆನಿಯ ಪಾಲುದಾರರನ್ನಾಗಿ ಮಾಡಿಕೊಳ್ಳಲಾಗುವುದೆಂದು ತೀರ್ಮಾನಿಸಿರುತ್ತಾರೆ ಹಾಗೂ ರಾಜ್ಯ ಸರ್ಕಾರ ಬಯಸಿದಲ್ಲಿ ಸರ್ಕಾರದ ಷೇರು ಹಣವನ್ನು ಸಂಪೂರ್ಣವಾಗಿ ಒಂದೇ ಕಂತಿನಲ್ಲಿ ಪಾವತಿಸುವುದಾಗಿ ಸಹ ನಿರ್ಣಯಿಸಿರುತ್ತಾರೆ. ಸರ್ಕಾರ ದಿನಾಂಕ:15.12.2006ರ ಉಲ್ಲೇಖ(2)ರ ಪತ್ರದಲ್ಲಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಕಾರ್ಖಾನೆಯನ್ನು ಪಬ್ಲಿಕ್ ಲಿಕಂ ಆಗಿ ಪರಿವರ್ತಿಸಲು ಅನುಮತಿ ನೀಡಿದೆ.

1) ಕಾರ್ಖಾನೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72ರನ್ವಯ ಸಮಾಪನೆ ಗೊಳಿಸಿ ಸಮಾಪನಾಧಿಕಾರಿಯನ್ನು ನೇಮಿಸುವುದು.

2) ಸರ್ಕಾರ ನೀಡಿದ ಷೇರು ಬಂಡವಾಳ ರೂ, 820.00 ಲಕ್ಷಗಳನ್ನು ಒಂದೇ ಕಂತಿನಲ್ಲಿ ಮರುಪಾವತಿ ಮಾಡುವಂತೆ ಸೂಚನೆ ನೀಡುವುದು.

3) ಸದಸ್ಯರಿಂದ ಪಡೆದಿರುವ ಷೇರುಗಳನ್ನು ಸದಸ್ಯರು ಒಪ್ಪುವುದಾದರೆ ಅವರನ್ನು ಕಂಪೆನಿಯ ಪಾಲುದಾರರನ್ನಾಗಿ ಮಾಡಿಕೊಳ್ಳುವುದು. ಒಪ್ಪದಿದ್ದಲ್ಲಿ, ಅವರುಗಳ ಷೇರು ಹಣವನ್ನು ಮರಳಿಸುವುದು.

ಉಲ್ಲೇಖ (3) ಮತ್ತು (4)ರ ಪತ್ರಗಳನ್ವಯ ಕಾರ್ಖಾನೆಯ ಅಧ್ಯಕ್ಷರು, ಸರ್ಕಾರದ ಷರತ್ತುಗಳನ್ವಯ ಹಾಗೂ ಕಾರ್ಖಾನೆಯ ಮಹಾಸಭೆಯ ದಿನಾಂಕ:25.9.2006ರ ನಡವಳಿಕೆಗಳು ಮತ್ತು ದಿನಾಂಕ:24.1.2007 ರಂದು ಆಡಳಿತ ಮಂಡಳಿಯ ತೀರ್ಮಾನದ ಪ್ರಕಾರ ಕ್ರಮ ವಹಿಸಲು ಬದ್ಧರಾಗಿರುವುದಾಗಿ ತಿಳಿಸಿ ಸಧ್ಯ ಈಗ ಇರುವ ಶ್ರೀ ಭೀಮಾಶಂಕರ್ ಸಹಕಾರಿ ಸಕ್ಕರೆ ಕಾರ್ಖಾನೆಯ ಷೇರುದಾರರು ಮತ್ತು ಕಬ್ಬು ಬೆಳೆಯುವ ರೈತರು ಕೂಡಿಕೊಂಡು ಸ್ಥಾಪಿಸಲಾಗುವ ರಾಯಲ್ ಫರ್ಲ್ಸ್ ಶುಗರ್ಸ್ ಲಿ., ಇದಕ್ಕೆ ಶ್ರಿ ಭೀಮಾಶಂಕರ್ ಸಹಕಾರಿ ಸಕ್ಕರೆ ಕಾರ್ಖಾನೆಯನ್ನು ಸಮಾಪನೆಗೊಳಿಸಿದಾಗ ಅದರ ಎಲ್ಲಾ ಆಸ್ತಿ ಮತ್ತು ಜವಾಬ್ದಾರಿಗಳನ್ನು ಹಸ್ತಾಂತರಿಸಲು ಸಮಾಪನಾಧಿಕಾರಿಗಳಿಗೆ ಆದೇಶಿಸಬೇಕೆಂದು ದಿನಾಂಕ:20.2.2007 ರ ಮೂಲಕ ಉಲ್ಲೇಖ (5)ರ ಪತ್ರದಲ್ಲಿ ಕಾರ್ಖಾನೆಯ ಅಧ್ಯಕ್ಷರು ಕೋರಿರುತ್ತಾರೆ.

ಈ ಕಾರ್ಖಾನೆಯನ್ನು ಸಹಕಾರಿ ಕ್ಷೇತ್ರದಲ್ಲಿ ಮುಂದುವರಿಸಿದರೆ ಈ ಕಾರ್ಖಾನೆಯನ್ನು ಪೂರ್ಣಗೊಳಿಸಲು ಸಾಧ್ಯವಿಲ್ಲದಿರುವುದನ್ನು ಮನಗಂಡು ಸರ್ಕಾರ ದಿನಾಂಕ:15.12.2006ರ ಪತ್ರದಲ್ಲಿ ಅನುಮತಿಸಿರುವಂತೆ ಹಾಗೂ ಕಾರ್ಖಾನೆಯನ್ನು ಸಮಾಪನೆಗೊಳಿಸಲು ದಿನಾಂಕ:25.9.2006 ರಂದು ಕಾರ್ಖಾನೆಯ ವಾರ್ಷಿಕ ಮಹಾ ಸಭೆಯಲ್ಲಿ ನಿರ್ಣಯಿಸಿರುವ ಹಿನ್ನಲೆಯಲ್ಲಿ ಮತ್ತು ಷರತ್ತುಗಳನ್ನು ಪೂರೈಸಲು ಒಪ್ಪಿರುವುದರಿಂದ ಕಾರ್ಖಾನೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 ರನ್ವಯ ಸಮಾಪನೆಗೊಳಿಸಲು ಈ ಕೆಳಕಂಡಂತೆ ಆದೇಶ ಮಾಡಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 (2)(ಬಿ)(ಸಿ) ರಡಿ ಹಾಗೂ ಸರ್ಕಾರದ ಅಧಿಸೂಚನೆ ಕ್ರ. CMW69/CLM/2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರ ಚಲಾಯಿಸಿ, ಬಿಹೆಚ್. ಮಂಜುನಾಥ್, ಭಾ.ಆ.ಸೇ., ಆಯುಕ್ತರು ಕಬ್ಬು ಅಭಿವೃದಿ ಹಾಗು ಸಕ್ಕರೆ ನಿರ್ದೇಶಕರು ಆದ ನಾನು ಶ್ರೀ ಭಿಮಾಶಂಕರ್ ಸಹಕಾರಿ ಸಕ್ಕರೆ ಕಾರ್ಖಾನೆ (ನಿ), ಇಂಡಿ, ಸಿಂಧಗಿ (ಮರಗೂರು) ಬಿಜಾಪುರ ಜಿಲ್ಲೆ ಇದನ್ನು ಸಮಾಪನೆಗೊಳಿಸಿ ಈ ಕೂಡಲೇ ಜಾರಿಗೆ ಬರುವಂತೆ ಆದೇಶಿರುತ್ತೇನೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73 ರನ್ವಯ ಸದರಿ ಕಾರ್ಖಾನೆಯ ಸಮಾಪನಾಧಿಕಾರಿಯಾಗಿ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು ಬೆಳಗಾಂ ಪ್ರಾಂತ್ಯ, ಬೆಳಗಾಂರವರನ್ನು ಈ ಕೂಡಲೆ ಜಾರಿಗೆ ಬರುವಂತೆ ನೇಮಿಸಿದ್ದೇನೆ. ಸಮಾಪನಾಧಿಕಾರಿಗಳು ಶ್ರೀ ಭೀಮಾಶಂಕರ್ ಸಹಕಾರಿ ಸಕ್ಕರೆ ಕಾರ್ಖಾನೆಯ ಸಮಗ್ರ ಪ್ರಭಾರ ಮತ್ತು ಆಸ್ತಿಯನ್ನು ವಶಕ್ಕೆ ಕೂಡಲೆ ತೆಗೆದುಕೊಳ್ಳುವುದು ಮತ್ತು ಕಾರ್ಖಾನೆಯ ಆಸ್ತಿ ಜವಾಬ್ದಾರಿಯನ್ನು ಕರ್ನಾಟಕ ಸಹಕಾರರ ಸಂಘಗಳ ಕಾಯ್ದೆ 1959ರ ಕಲಂ 74ರನುಸಾರ ಈ ಕೆಳಕಂಡ ಅಂಶಗಳಿಗೊಳಪಟ್ಟು ವಿಲೇವಾರಿ ಮಾಡಲು ಆದೇಶಿಸಿದೆ.

1) ಕಾರ್ಖಾನೆಯು ಹೊಂದಿರುವ ಸರ್ಕಾರದ ಪೂರ್ಣ ಶೇರು ಬಂಡವಾಳ ರೂ. 8.20 ಕೋಟಿಗಳನ್ನು ಒಂದೇ ಕಂತಿನಲ್ಲಿ ಸರ್ಕಾರಕ್ಕೆ ಪಾವತಿಸತಕ್ಕದ್ದು.

2) ಸರ್ಕಾರದ ಷೇರು ಬಂಡವಾಳ ಮತ್ತು ಇತರೆ ಜವಾಬ್ದಾರಿಯನ್ನು ಮರು ಪಾವತಿಸಿದ ನಂತರದಲ್ಲಿ ಶ್ರೀ ಭೀಮಾಶಂಕರ್ ಸಹಕಾರಿ ಸಕ್ಕರೆ ಕಾರ್ಖಾನೆ ಹೊಂದಿರುವ ಪೂರ್ಣ ಆಸ್ತಿ ಮತ್ತು ಜವಾಬ್ದಾರಿಯನ್ನು ಉದ್ದೇಶಿತ ರಾಯಲ್ ಫರ್ಲ್ಸ್ ಶೂಗರ್ಸ್ ಲಿ., ಇದಕ್ಕೆ ಹಸ್ತಾಂತರಿಸಲು ಕ್ರಮವಹಿಸತಕ್ಕದ್ದು.

3) ಕಾರ್ಖಾನೆಯ ಆದ್ಯತಾ ಪಟ್ಟಿಯನ್ನು ತಯಾರಿಸಿ ಒಪ್ಪಿಗೆಗಾಗಿ ಈ ಕಛೇರಿಗೆ ಸಲ್ಲಿಸತಕ್ಕದ್ದು.

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಕಾರ್ಖಾನೆಯ ನೊಂದಣಿ ರದ್ದತಿ ಬಗ್ಗೆ ಸಕ್ಷಮ ಪ್ರಾಧಿಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿನಾಂಕ:28.2.2007 ರಂದು ನೀಡಲಾಗಿದೆ.

**ಬಿ.ಹೆಚ್. ಮಂಜುನಾಥ್**

ಪಿ.ಆರ್. 290 ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು.

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು

**ವಿಷಯ:** ಕೋಲಾರ ಜಿಲ್ಲೆ ಮುಳುಬಾಗಿಲು ತಾಲ್ಲೂಕು, ದೇವರಾಯಸಮುದ್ರ ಗ್ರಾಮದ ಸರ್ವೆ ನಂ.112 ರಲ್ಲಿ 1.20. ಎಕರೆಗೆ ಮಲ್ಟಿಕಲರ್ ಶಿಲೆಗಾಗಿ ಶ್ರೀ ಎಂ. ಗೋವಿಂದಪ್ಪ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 503 ರ ಗುತ್ತಿಗೆಯನ್ನು ಪುನರ್ ಸ್ಥಾಪಿಸಿರುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಪತ್ರ ಸಂಖ್ಯೆ:ಸಿಐ 62 ಎಂ.ಎಂ.ಎನ್ 2006 ದಿನಾಂಕ:10.1.2007.

**ಪ್ರಸ್ತಾವನೆ:**

ಕೋಲಾರ ಜಿಲ್ಲೆ, ಮುಳುಬಾಗಿಲು ತಾಲ್ಲೂಕು, ದೇವರಾಯಸಮುದ್ರ ಗ್ರಾಮದ ಸರ್ವೆ ನಂ.112 ರಲ್ಲಿ 1.20. ಎಕರೆ ವಿಸ್ತೀರ್ಣದಲ್ಲಿ ಮಲ್ಟಿಕಲರ್ ಶಿಲೆಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 503 ರ ಗುತ್ತಿಗೆಯನ್ನು ಶ್ರೀ ಎಂ. ಗೋವಿಂದಪ್ಪ ರವರ ಹೆಸರಿನಲ್ಲಿ ದಿನಾಂಕ:27.3.2002 ರಿಂದ 10 ವರ್ಷಗಳಿಗಾಗಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ಗುತ್ತಿಗೆ ಮೇಲಿನ ಬಾಕಿಯನ್ನು ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿದ ಕಾರಣ ದಿನಾಂಕ :1.4.2005 ರಿಂದ ಜಾರಿಗೆ ಬರುವಂತೆ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದ ಅಡಿಯಲ್ಲಿ ಗುತ್ತಿಗೆಯನ್ನು ರದುಗೊಳಿಸಲಾಗಿತ್ತು.

ಅದರಂತೆ ಗುತ್ತಿಗೆದಾರರು ಪರಿಷ್ಕರಣ ಅರ್ಜಿಯನ್ನು ನಿಯಮ 53 (2)ರ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರಂತೆ ಸರ್ಕಾರಕ್ಕೆ ಸಲ್ಲಿಸಿದ್ದು ಅದರಂತೆ ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ಅರ್ಜಿಯನ್ನು ಪರಿಗಣಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲು ಆದೇಶಿಸಿರುವುದರಿಂದ ಈ ಆದೇಶ ಮಾಡಲಾಗಿದೆ.

**ಆದೇಶ**

**ಆದೇಶ ಸಂಖ್ಯೆ: ಗಭೂಇ:ಕಗಗು:503:2006-07, 4360 ದಿನಾಂಕ 5ನೇ ಮಾರ್ಚ್ 2007**

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಸರ್ಕಾರದ ಪತ್ರದ ದಿನಾಂಕ :28.7.2005 ರಲ್ಲಿ ನಿರ್ದೇಶಿಸಿರುವಂತೆ ಕೋಲಾರ ಜಿಲ್ಲೆ ಮುಳುಬಾಗಿಲು ತಾಲ್ಲುಕು, ದೇವರಾಯಸಮುದ್ರ ಗ್ರಾಮದ ಸರ್ವೆ ನಂ. 112 ರಲ್ಲಿ 1.20 ಎಕರೆ ವಿಸ್ತೀರ್ಣದಲ್ಲಿ ಮಲ್ಟಿಕಲರ್ ಶಿಲೆಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 503 ರ ಗುತ್ತಿಗೆಯನ್ನು ಶ್ರೀ ಎಂ. ಗೋವಿಂದಪ್ಪ ರವರ ಹೆಸರಿನಲ್ಲಿ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 503 ರ ಗುತ್ತಿಗೆಯನ್ನು ಗುತ್ತಿಗೆ ರದ್ದುಗೊಳಿಸಿದ ದಿನಾಂಕ: 1.4.2005 ರಿಂದ ಗುತ್ತಿಗೆಯನ್ನು ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮಗಳ ಷರತ್ತಿಗೆ ಒಳಪಡಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ. ಕಲ್ಲು ಗಣಿ ಗುತ್ತಿಗೆ ಅವಧಿ ಹಾಗು ಇನ್ನಿತರ ಷರತ್ತಿನಂತೆ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ.

ನಿರ್ದೇಶಕರು,

ಪಿ.ಆರ್. 291 ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

## ಅಭಿಯೋಗ ಉಪನಿರ್ದೇಶಕರು, ಬೆಂಗಳೂರು ವಿಭಾಗ, ಬೆಂಗಳೂರು ರವರ ಕಛೇರಿ ನಡವಳಿ

**ಉಪಸ್ಥಿತರು:** ಶ್ರೀ ಎಸ್.ಪಿ. ಅಣ್ಣೇಗೌಡ, ಬಿ.ಎಸ್ಸಿ., ಎಲ್.ಎಲ್.ಬಿ. ಅಭಿಯೋಗ ಉಪನಿರ್ದೇಶಕರು, ಬೆಂಗಳೂರು ವಿಭಾಗ, ಬೆಂಗಳೂರು.

**ವಿಷಯ:** ಶ್ರೀ ಆರ್ ಅಬ್ಬಯ್ಯರೆಡ್ಡಿ, ದಲಾಯತ್, ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಹೊಸಕೋಟೆ, ಇವರನ್ನು ಸೇವೆಯಿಂದ ವಜಾ ಮಾಡುವ ಕುರಿತು.

**ಉಲ್ಲೇಖ:** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲ್) ನಿಯಮಗಳು, 1957 ನಿಯಮ 11ರ ಅನ್ವಯ.

2 ಸರ್ಕಾರದ ಸುತ್ತೋಲೆ ಸಂಕ್ಯೆ:ಸಿಆಸುಇ 18 ನೇ ಇವಿ 2001, ದಿನಾಂಕ 14.9.2001.

3 ಸಹಾ. ಸರ್ಕಾರಿ ಅಭಿಯೋಜಕರು, ಹೊಸಕೋಟೆ ಇವರ ಕಛೇರಿ ಮೆಮೋ ಸಂಖ್ಯೆ:ಸಸ:ಹೊಕೊ: 92:04 ದಿನಾಂಕ:15.4.2004 ಮತ್ತು ಪತ್ರ ಸಂಖ್ಯೆ:164: 2004, ದಿನಾಂಕ:16.6.2004.

4 ಈ ಕಛೇರಿ ಕಾರಣ ಕೇಳುವ ನೋಟೀಸ್ ಸಂಖ್ಯೆ:ಆಉನಿ:ಬೆಂವಿ:ಸಿಶಾ:130:04-05, ದಿನಾಂಕ: 28.6.2004.

5 ಈ ಕಛೇರಿ ಪತ್ರ ಸಂಖ್ಯೆ:ಆಉನಿ::ಬೆಂವಿ:ಸಿಶಾ:130:04-05, ದಿನಾಂಕ:29.7.2004.

6 ಈ ಕಛೇರಿ ಕಾರಣ ಕೇಳುವ ನೋಟೀಸ್ ಸಂಖ್ಯೆ :ಅಉನಿ:ಬೆಂವಿ:ಸಿಶಾ:130:04-05, ದಿನಾಂಕ: 8.9.2004.

7 ಸಸಅ, ಹೊಸಕೋಟೆ ಇವರ ಕಛೇರಿ ಕಾರಣ ಕೇಳಿದ ನೋಟೀಸ್ ಸಂಖ್ಯೆ:ಸಸ:ಹೊಕೊ:228.04, ದಿ:8.10.04.

8 ಈ ಕಛೇರಿ ಕಾರಣ ಕೇಳುವ ನೋಟೀಸ್ ಸಂಖ್ಯೆ :ಆಉನಿ:ಬೆಂವಿ:ಸಿಶಾ:ಇ.ವಿ.01:04.05, ದಿ:17.6.05 ಮತ್ತು 21.7.05.

9 ಈ ಕಛೇರಿ ನಡವಳಿ ಆದೇಶ ಸಂಖ್ಯೆ:ಆಉನಿ:ಬೆಂವಿ:ಸಿಶಾ:ಇವಿ:01:04–05, ದಿನಾಂಕ :6.12.2005.

10 ಶ್ರೀ ಆರ್. ಅಬ್ಬಯ್ಯರೆಡ್ಡಿ, ದಲಾಯತ್, ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಹೊಸಕೋಟೆ, ಇವರು ದಿನಾಂಕ:28.2.06 ರಂದು ವಿಚಾರಣಾ ಅಧಿಕಾರಿಗಳ ಮುಂದೆ ವಿಚಾರಣಾ ದಾಖಲಾತಿಗಳನ್ನು ಮತ್ತು ಇನ್ನಿತ್ತರ ವಿವರಗಳನ್ನು ಸ್ವೀಕರಿಸಿದಾಗ ಬರೆದು ಕೊಟ್ಟ ಪತ್ರ.

11 ವಿಚಾರಣಾಧಿಕಾರಿಗಳು, ಇಲಾಖಾ ವಿಚಾರಣೆ ಇವರ ವಿಚಾರಣಾ ವರದಿ ಸಂಖ್ಯೆ:ಇಲ್ಲ, ದಿನಾಂಕ:19.5.2006.

12 ಈ ಕಛೇರಿ 2ನೇ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ: ಆಉನಿ:ಬೆಂವಿ:ಸಿಶಾ:130:04–05, ದಿ:19.6.06 ಮತ್ತು 26.7.2006.

13 ಕಛೇರಿ ಟಿಪ್ಪಣಿ ಮೇಲಿನ ಆದೇಶ ದಿನಾಂಕ :17.2.2007.

**ಪ್ರಸ್ತಾವನೆ:**

ಶ್ರೀ ಆರ್. ಅಬ್ಬಯ್ಯರೆಡ್ಡಿ, ದಲಾಯತ್, ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಹೊಸಕೋಟೆ, ಆದ ನೀವು ದಿನಾಂಕ:1.4.2004 ರಿಂದ 20.10.2004 ರವರೆಗೆ ಮತ್ತು ಪುನಃ ದಿನಾಂಕ:25.10.2004 ರಿಂದ 15.2.2007 ರವರೆಗೆ ಸಹಾಯಕ ಸರ್ಕಾರಿ ಅಭಿಯೋಜಕರು, ಹೊಸಕೋಟೆ, ಈ ಕಛೇರಿಗೆ ಅನಧಿಕೃತ ಗೈರು ಹಾಜರಾಗಿರುವ ಕುರಿತು ಉಲ್ಲೇಖ (3) ರಲ್ಲಿ ವರದಿ ಮಾಡಿದ ಮೇರೆಗೆ ಉಲ್ಲೇಖ(4) ರಿಂದ (8) ರವರೆಗಿನ ಕಾರಣ ಕೇಳುವ ನೋಟೀಸುಗಳನ್ನು ನೊಂದಣಿ ಅಂಚೆ ಮೂಲಕ ಜಾರಿ ಮಾಡಿದ್ದು, ಆ ನೋಟೀಸುಗಳನ್ನು ಸ್ವೀಕರಿಸಿಯೂ ಸಹಾ ನೀವು ಯಾವುದೇ ಲಿಖಿತ ಹೇಳಿಕೆ ಸಲ್ಲಿಸಿರುವುದಿಲ್ಲ.

ಶಿಸ್ತು ಪಾಲನಾ ಪ್ರಾಧಿಕಾರದ ಉಲ್ಲೇಖ (8) ಮತ್ತು (10)ರಲ್ಲಿ ಕಾರಣ ಕೇಳುವ ಸೂಚನಾ ಪತ್ರದೊಂದಿಗೆ ಅನುಬಂಧ 1 ರಲ್ಲಿ 4 ಆರೋಪಗಳನ್ನು ಹೊರಿಸಿ ಕರ್ನಾಟಕ ಸರ್ಕಾರಿ ಸೇವಾ (ನಡತೆ, ನಿಯಮಗಳು 1966ರ) ನಿಯಮ 3(i)(ii)(iii) ಅನ್ವಯ ಉಲ್ಲಂಘಿಸಿದ್ದಕ್ಕೆ ಕುರಿತು ನೋಟೀಸು ಜಾರಿ ಮಾಡಿ, ಸದರಿ ನೋಟೀಸು ತಲುಪಿದ 15 ದಿನಗಳಲ್ಲಿ ಲಿಖಿತ ಹೇಳಿಕೆಯನ್ನು ಸಲ್ಲಿಸಲು ಸೂಚಿಸಿದಾಗ್ಯೂ ಸಹಾ ನೋಟೀಸು ಸ್ವೀಕರಿಸಿದ್ದ ನೀವು ಯಾವುದೇ ಲಿಖಿತ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ.

ಆದ್ದರಿಂದ ಉಲ್ಲೇಖ (9) ರಲ್ಲಿ, ನೀವು 1.4.2004 ರಿಂದ 20.10.2004 ರವರೆಗೆ ಸಹಾಯಕ ಸರ್ಕಾರಿ ಅಭಿಯೋಜಕರು, ಹೊಸಕೋಟೆ ಈ ಕಛೇರಿಗೆ ಅನಧಿಕೃತ ಗೈರು ಹಾಜರಾಗಿ ನಿರ್ದಿಷ್ಟವಾದ ಮತ್ತು ಸ್ಪಷ್ಟವಾದ ದುರ್ನಡತೆಗಳನ್ನು ಎಸಗಿರುವ ಸಂಬಂಧ ಇಲಾಖೆ ವಿಚಾರಣೆಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ಮೇರೆಗೆ ನಿಮ್ಮ ವಿರುದ್ಧ ಇಲಾಖಾ ವಿಚಾರಣೆ ಹೂಡುವುದು ಸೂಕ್ತವೆಂದು ತೀರ್ಮಾನಕ್ಕೆ ಬಂದು ನಿಯಮಗಳನ್ವಯ ವಿಚಾರಣಾಧಿಕಾರಿಗಳು ಮತ್ತು ಮಂಡನಾಧಿಕಾರಿಗಳನ್ನು ನೇಮಕಾತಿ ಮಾಡಿದ ಮೇರೆಗೆ ವಿಚಾರಣಾಧಿಕಾರಿಗಳು ನೀವು ಅನಧಿಕೃತ ಗೈರು ಹಾಜರಾದ ಬಗ್ಗೆ ವಿಚಾರಣೆ ಮಾಡಿ ವಿಚಾರಣಾ ವರದಿಯನ್ನು ಉಲ್ಲೇಖ (11) ರಲ್ಲಿ ಸಲ್ಲಿಸಿರುತ್ತಾರೆ.

ಆದ ಕಾರಣ ಉಲ್ಲೇಖ (12) ರಲ್ಲಿ ಎರಡನೇ ಕಾರಣ ಕೇಳುವ ಸೂಚನಾ ಪತ್ರದೊಂದಿಗೆ ಇಲಾಖಾ ವಿಚಾರಣೆಯ ವರದಿಯನ್ನು ನಿಮಗೆ ಜಾರಿ ಮಾಡಿ ಸದರಿ ಸಂಬಂಧ ಪ್ರತಿಯೊಂದು ಸಾಬೀತಾದ ಆರೋಪಗಳ ಕುರಿತು ವಿಚಾರಣಾ ವರದಿಗೆ ಲಿಖಿತ ಹೇಳಿಕೆಯನ್ನು ಕಾರಣ ಕೇಳುವ ನೋಟೀಸ್ ಸ್ವೀಕರಿಸಿದ 15 ದಿನಗಳ ಒಳಗೆ ಸಲ್ಲಿಸಲು ನೊಂದಣಿ ಅಂಚೆ ಮೂಲಕ ಕಳುಹಿಸಿದ್ದ ವರದಿಯನ್ನು ಸ್ವೀಕರಿಸಿದ್ದು, ಆ ವರದಿಗೆ ಲಿಖಿತ ಹೇಳಿಕೆ ಸಲ್ಲಿಸಿರುವುದಿಲ್ಲ.

ಮೇಲ್ಕಾಣಿಸಿದ ಉಲ್ಲೇಖಗಳ ಅನುಸಾರ, ವಿಚಾರಣಾಧಿಕಾರಿಗಳ ವರದಿಯನ್ವಯ ಮತ್ತು ಉಲ್ಲೇಖ (1)ರ ಆದೇಶಾನುಸಾರ ಮತ್ತು ಸರ್ಕಾರದ ಸುತ್ತೋಲೆ ಸಂಖ್ಯೆ:ಸಿಆಸುಇ 18 ಚಿಇವಿ 2001, ದಿನಾಂಕ:14.9.2001ರ ಅನುಗುಣವಾಗಿ ನೌಕರರು ದಿನಾಂಕ:25.10.2004 ರಿಂದ 15.2.2007 ರವರೆಗೆ ಸಹಾಯಕ ಸರ್ಕಾರಿ ಅಭಿಯೋಜಕರು, ಹೊಸಕೋಟೆ, ಈ ಕಛೇರಿಗೆ ಅನಧಿಕೃತ ಗೈರು ಹಾಜರಾಗಿ, ನಿರ್ದಿಷ್ಟವಾದ ಮತ್ತು ಸ್ಪಷ್ಟವಾದ ದುರ್ನಡತೆಗಳನ್ನು ಎಸಗಿರುವುದು ಸಾಬೀತಾಗಿರುವುದರಿಂದ ನೌಕರರಿಗೆ ಶಿಸ್ತು ಪ್ರಾಧಿಕಾರಿಯಾಗಿ: ನೇಮಕಾತಿ ಅಧಿಕಾರಿಯಾಗಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಆಉನಿ:ಬೆಂವಿ:ನಿಶಾ:ಇ.ವಿ.01:2004–05 ಬೆಂಗಳೂರು, ದಿನಾಂಕ: 19ನೇ ಫೆಬ್ರವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ,. ಶ್ರೀ ಆರ್. ಅಬ್ಬಯ್ಯರೆಡ್ಡಿ, ದಲಾಯತ್, ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಹೊಸಕೋಟೆ, ಆದ ನೀವು ದಿನಾಂಕ:1.4.2004 ರಿಂದ 20.10.2004 ರವರೆಗೆ ಮತ್ತು ದಿನಾಂಕ 25.10.2004 ರಿಂದ 15.2.2007 ರವರೆಗೆ ಸರ್ಕಾರಿ ಸೇವೆಗೆ ಅನಧಿಕೃತ ಗೈರು ಹಾಜರಾಗಿರುವುದು ಇಲಾಖೆ ವಿಚಾರಣೆಯಿಂದ ದೃಢಪಟ್ಟಿದೆ, ಇದನ್ನು ಪರಿಗಣಿಸಿ ಕರ್ನಾಟಕ ನಾಗರೀಕ ಸೇವಾ (ವಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8 (viii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿಮ್ಮನ್ನು (ಸರ್ಕಾರಿ ಸೇವೆ) ದಲಾಯತ್ ಹುದ್ದೆಯಿಂದ ದಿನಾಂಕ 25.10.2004 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಲಾಗಿದೆ.

**ಎಸ್.ಪಿ. ಅಣ್ಣೇಗೌಡ**

ಪಿ.ಆರ್. 293

ಅಭಿಯೋಗ ಉಪ ನಿರ್ದೇಶಕರು, ಬೆಂಗಳೂರು ವಿಭಾಗ, ಹಾಗೂ ಶಿಸ್ತುಪ್ರಾಧಿಕಾರಿಗಳು.

**ಕಾರ್ಮಿಕಾ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-II, ವಿಜಾಪುರ ಜಿಲ್ಲೆ ವಿಜಾಪೂರ**

**ಪ್ರಕರಣದ ಸಂಖ್ಯೆ:ಡಬ್ಲ್ಯೂಸಿಎ/ಎಸ್ಆರ್- 47/07 ದಿನಾಂಕ: 27ನೇ ಫೆಬ್ರವರಿ 2007**

**ಅರ್ಜಿದಾರರು:**

1 Mahadve s/o Namdev Bhosle.
2 Vaijantha w/o Mahadev Bhosle.
3 Sarubai w/o Baban Bhosle
4 Ashwini D/o Baban Bhosle
5 Mahesh S/o Baban Bhosle
6 Gayatri D/o Baban Bhosle.
All are residing at Doble Galli A/p Bijapur.

**ವಿರುದ್ಧ**

**ಪ್ರತಿವಾದಿಗಳು:**

1. Mr. Bandaghar.
Age Major Lorry owner No. MII/13/G 2707
R/o Anakhandal Tq. Sangola, Dist: Solapur.
2 D.M. The New India Assurance
Co. ltd Sangamesh Nagar. Gulbarga

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಬಬನ್ ಮಹಾದೇವ ಭೋಸಲೆ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:18.2.2007 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗು ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳನ್ನು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಷೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು, ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಉಪವಿಭಾಗ-II ವಿಜಾಪೂರ.

ಪಿ.ಆರ್. 294

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೊಪ್ಪಳ**

**ಪ್ರಕಟಣೆ ಸಂಖ್ಯೆ: ಕಾಅಕೊ/ಕಾನಪ/50/2007 ದಿನಾಂಕ :24ನೇ ಫೆಬ್ರವರಿ 2007**

**ಅರ್ಜಿದಾರರು:**

1. ಬಾಬುಸಾಬ ತಂದೆ ಫರೀದ್‌ಸಾಬ ಮಕಾನ್ ದಾರ್.
2. ಜುಬೇದಾಬೇಗಂ ಗಂಡ ಬಾಬುಸಾಬ
ಸಾ:ಸಿರಪ್ಪಯ್ಯನ ಮಠ, ತಾ:ಜಿ:ಕೊಪ್ಪಳ.

**ವಿರುದ್ಧ**

**ಪ್ರತಿವಾದಿಗಳು:**

1. ಶ್ರೀಮತಿ ಚಂದ್ರಕಲಾ ಗಂಡ ಶ್ರೀ ಭಾಸ್ಕರ ಅಪ್ಪಾಜಿ ಜಯನಗರ, ಮೈಸೂರು.
2. ಡಿವಿಜನಲ್ ಮ್ಯಾನೇಜರ್, ಮೆ:ನ್ಯೂ ಇಂಡಿಯಾ ಅನ್ಸುರೆನ್ಸ್ ಕಂ.ಲಿ. ಬಳ್ಳಾರಿ.

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಅಜೀಜ್ ಅಹ್ಮದ್ ತಂದೆ ಬಾಬುಸಾಬ ಮಕಾನ್‌ದಾರ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:19.4.2006 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ಪರಿಹಾರ ಕಾಯ್ದೆ, 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಬಾಬುಸಾಬ ಮತ್ತು ಜುಬೇದಾಬೇಗಂ ಎಂಬುವವರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತುಕಾರ್ಮಿಕ ಪರಿಹಾರ
ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ.

ಪಿ.ಆರ್. 296

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೊಪ್ಪಳ**

**ಪ್ರಕಟಣೆ ಸಂಖ್ಯೆ: ಕಾಅಕೊ/ಕಾನಪ/62/2007 ದಿನಾಂಕ: 24ನೇ ಫೆಬ್ರವರಿ 2007**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1. ಬಸವರಾಜ ತಂದೆ ಹನುಮಗೌಡ ಗೌಡರ್, ಸಾ:ಹನಮಗಿರಿ, ತಾ:ಕುಷ್ಟಗಿ ಜಿ:ಕೊಪ್ಪಳ.
2. ಯಮನೂರ ತಂದೆ ಹನುಮಗೌಡ ಗೌಡರ್,

1. ಶ್ರೀಮತಿ ನುರಜಾನ್ ಗಂಡ ಮುರ್ತುಜಾಸಾಬ ಲೋಲಕಲ್, ಸಾ:ಹನುಮಸಾಗರ, ತಾ:ಕುಷ್ಟಗಿ ಜಿ: ಕೊಪ್ಪಳ.
2. ಡಿವಿಜನಲ್ ಮ್ಯಾನೇಜರ್, ಮೆ: ನ್ಯಾಶನಲ್ ಇನ್ಸೂರೆನ್ಸ್ ಕಂ.ಲಿ. ಗುಲಬರ್ಗಾ.

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಹನುಮಗೌಡ್ ತಂದೆ ಹನುಮಗೌಡ ಗೌಡರ್ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:22.5.2005 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ಪರಿಹಾರ ಕಾಯ್ದೆ, 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಬಸವರಾಜ ಮತ್ತು ಯಮನೂರ ಎಂಬುವವರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತುಕಾರ್ಮಿಕ ಪರಿಹಾರ
ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ.

ಪಿ.ಆರ್. 297

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೊಪ್ಪಳ**

**ಪ್ರಕಟಣೆ ಸಂಖ್ಯೆ: ಕಾಅಕೊ/ಕಾನಪ/64/2007 ದಿನಾಂಕ :24ನೇ ಫೆಬ್ರವರಿ 2007**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1. ಶ್ರೀಮತಿ ಶಿವಮ್ಮ ಗಂಡ ಹನುಮಪ್ಪ ಬಲಕುಂದಿ, ಸಾ:ಹಲಗೇರಿ, ತಾ:ಕುಷ್ಟಗಿ.
2. ಮಹಾಂತಪ್ಪ ತಂದೆ ಹನುಮಪ್ಪ ಬಲಕುಂದಿ
3 ಶರಣಪ್ಪ ತಂದೆ ಹನುಮಪ್ಪ ಬಲಕುಂದಿ
4 ಯಲ್ಲವ್ವ ತಂದೆ ಹನುಮಪ್ಪ ಬಲಕುಂದಿ
5 ಲಕ್ಷ್ಮಮ್ಮ ತಂದೆ ಹನುಮಪ್ಪ ಬಲಕುಂದಿ

1. ಶ್ರೀಮತಿ ಚಂದ್ರಕಲಾ ಗಂಡ ಶ್ರೀ ಭಾಸ್ಕರ ಅಪ್ಪಾಜಿ ಜಯನಗರ, ಮೈಸೂರು.
2. ಡಿವಿಜನಲ್ ಮ್ಯಾನೇಜರ್, ಮೆ: ನ್ಯೂ ಇಂಡಿಯಾ ಅನ್ಸುರೆನ್ಸ್ ಕಂ.ಲಿ. ಬಳ್ಳಾರಿ.

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶಾಂತವ್ವ ಗಂಡ ಬಸಪ್ಪ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:18.1.2005 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ಪರಿಹಾರ ಕಾಯ್ದೆ, 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಶಿವಮ್ಮ, ಮಹಾಂತಪ್ಪ, ಶರಣಪ್ಪ, ಯಲ್ಲವ್ವ ಮತ್ತು ಲಕ್ಷ್ಮಮ್ಮ ಎಂಬುವವರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತುಕಾರ್ಮಿಕ ಪರಿಹಾರ
ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ.

ಪಿ.ಆರ್. 298

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಮುಖ್ಯ ಇಂಜನೀಯರವರ ಕಛೇರಿ,**
**ಸಣ್ಣ ನೀರಾವರಿ [ಉತ್ತರ] ವಲಯ, ವಿಜಾಪೂರ**

**ಸಂ: ಮುಇಂ/ಸನೀ[ಉ]ವ/ಬಿಜೆಪಿ/ಮಾಹ/ಸಿ–1ಎ/2006–07/1262 ದಿನಾಂಕ: 15ನೇ ಫೆಬ್ರವರಿ 2007**

ಈ ಕಛೇರಿಯಲ್ಲಿ ಶ್ರೀ ಎಂ.ಎ. ಗೋಗಿ, ತಾಂತ್ರಿಕ ಸಹಾಯಕರು ಇವರಿಗೆ ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿಗಳನ್ನಾಗಿ ನೇಮಿಸಲಾಗಿತ್ತು. ಆದರೆ, ಶ್ರೀ ಆರ್.ಬಿ. ಪಾಟೀಲ, ತಾಂತ್ರಿಕ ಸಹಾಯಕರು ಇವರು ಶ್ರೀ. ಎಂ.ಎ. ಗೋಗಿ ತಾಂತ್ರಿಕ ಸಹಾಯಕರು ಇವರ ಸ್ಥಳದಲ್ಲಿ ವರ್ಗಾವಣೆಯ ಮೇರೆಗೆ ದಿನಾಂಕ:2.1.2007 ರಂದು ಹಾಜರಾದ ಪ್ರಯುಕ್ತ ಶ್ರೀ ಆರ್. ಬಿ. ಪಾಟೀಲ, ತಾಂತ್ರಿಕ ಸಹಾಯಕರು ಇವರನ್ನು ಈ ಕಾರ್ಯಾಲಯದಲ್ಲಿ ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿಗಳನ್ನಾಗಿ, ಮಾಹಿತಿ ಹಕ್ಕು ಅಧಿನಿಯಮ 2005 ರಡಿಯಲ್ಲಿ ಸೆಕ್ಷನ್ 5(2)ರ ಪ್ರಕಾರ ನೇಮಕ ಮಾಡಲಾಗಿದೆ.

| ಕ. ಸಂ. | ಕಛೇರಿಯ ಹೆಸರು | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) | ಕಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(2) | ಮೇಲ್ಮನಿ ಪ್ರಾಧಿಕಾರ ಸೆಕ್ಷನ್ 19(1) |
|---|---|---|---|---|
| 1 | ಮುಖ್ಯ ಇಂಜಿನೀಯರರು, ಸಣ್ಣ ನೀರಾವರಿ [ಉತ್ತರ] ವಲಯ ವಿಜಾಪೂರ | ಶ್ರೀ ಎಂ.ಕೆ. ನಿಂಬಾಳ, ಉಪ ಮುಖ್ಯ ಇಂಜನೀಯರರು, ಮುಖ್ಯ ಇಂಜನೀಯರವರ ಕಛೇಇ,. ಸಣ್ಣ ನೀರಾವರಿ [ಉ] ವಲಯ, ವಿಜಾಪೂರ. | ಶ್ರೀ ಆರ್.ಬಿ. ಪಾಟೀಲ್, ತಾಂತ್ರಿಕ ಸಹಾಯಕರು, ಮುಖ್ಯ ಇಂಜನೀಯರವರ ಕಛೇರಿ, ಸಣ್ಣ ನೀರಾವರಿ [ಉ] ವಲಯ, ವಿಜಾಪೂರ. | ಶ್ರೀ ಸದಶಿವರೆಡ್ಡಿ. ಬಿ.ಪಾಟೀಲ, ಮುಖ್ಯ ಇಂಜನೀಯರರು, ಸಣ್ಣ ನೀರಾವರಿ [ಉತ್ತರ]ವಲಯ, ವಿಜಾಪೂರ. |

**ಸದಾಶಿವರೆಡ್ಡಿ. ಬಿ. ಪಾಟೀಲ**
ಪಿ.ಆರ್. 299
ಮುಖ್ಯ ಇಂಜನೀಯರು,
ಸಣ್ಣ ನೀರಾವರಿ [ಉತ್ತರ]ವಲಯ, ವಿಜಾಪೂರ.

**IN THE COURT OF 8TH ADDITIONAL CHIEF METROPOLITAIN MAGISTRATE BANGALORE CITY**

It is here by notified for the information of the Public that the under mentioned two wheelers and T.V. Set which are in the custody of Seshadripuram police Station, Bangalore city as unclaimed shall be conficated to the Government and disposed of according to law if not claimed by the owener with proof of owenership within Three months from the date of the publication of this notification.

| Sl. No | CR NO & CMISS NO | P.F.NO | VEIHCLE NO | NATURE OF PROPERTY |
|---|---|---|---|---|
| 1 | Cr No-11/2006/ u/s 379 IPC | 13/2006 | AP-21 F 7786 eng no-ILS 303808 CH NO-00 C4 Ls 303808 | YAMAHA YBX BLACK COLOUR |
| 2 | CMISS NO-281/2006 | 77/2006 | KA-02-K-6723 ENG NO-08 E 94 A 14119 CH NO-08 F 94 A 31598 | BAJAJ SCOOTER CEMENT COLOUR |
| 3 | CMISS NO -956/2001 | 192/2001 | KA-03-6346-ENG NO-IT B 250-055149 CH NO-055085 | YEZDI M/C BLACK COLOUR |
| 4 | CR NO-277/2002 | 113/2002 | - | 0NE 21 ONIDA COLOUR T.V. |

By the court order
P.R. 300
8th Additional chief Metropolitan Magistrate
Court, Bangalore city

**ಶಿಕ್ಷಣ ಇಲಾಖೆ**

**ತಿದ್ದುಪಡಿ ಸಂಖ್ಯೆ: ಇಡಿ 388 ಡಿಪಿಐ 2006, ಬೆಂಗಳೂರು, ದಿನಾಂಕ: 23ನೇ ಫೆಬ್ರವರಿ 2007**

ಸರ್ಕಾರದ ಅಧಿಸೂಚನೆ ಸಂಖ್ಯೆ :ಇಡಿ 564 ಡಿಪಿಐ 2004, ದಿನಾಂಕ:4.5.2005 ರ ಐದನೆ ಸಾಲಿನಲ್ಲಿ ಹನುಮಂತರಾಯ ಇವರಿಗೆ ಪದೋನ್ನತಿ ನೀಡಿದ ದಿನಾಂಕದಿಂದ ಎಂಬ ಪದದ ಮುಂದೆ **"ಮತ್ತು ಹಳೇ ವೇತನ ಶ್ರೇಣಿ ರೂ.2050–3950 ರ ಉನ್ನತೀಕರಿಸಿದ ಪತ್ರಾಂಕಿತ ಸಹಾಯಕರ ಹುದ್ದೆಗೆ ಬಡ್ತಿ ನೀಡಲು ಶ್ರೀ ಎಂ.ಕೆ. ಸುರಪುರ, ರವರು ಅಭಿಮತ (Option) ನೀಡಿದ ದಿನಾಂಕ:10.3.1995 ರಿಂದಲೂ"** ಎಂದು ಸೇರಿಸಿ ಓದಿಕೊಳ್ಳತಕ್ಕದ್ದು, ಮತ್ತು 10ನೇ ಸಾಲಿನಲ್ಲಿ ಕರ್ನಾಟಕ ನಾಗರೀಕ ಸೇವಾ (ಆರ್.ಪಿ.ಪಿ.) ನಿಯಮಾವಳಿಗಳು 1978 **"ನಿಯಮ 2(1)(ಎ)"** ಪ್ರಕಾರ ಎಂಬುದರ ಬದಲಾಗಿ "ನಿಯಮ 2(3)" ಪ್ರಕಾರ ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸ್ವರ್ಣಲತಾ. ಎಂ. ಭಂಡಾರೆ**
ಪಿ.ಆರ್. 301
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ, (ಸೇವೆಗಳು–1,2)

## ಲೋಕೋಪಯೋಗಿ ಇಲಾಖೆ ಎಕ್ಸಿಕ್ಯುಟಿವ್ ಇಂಜಿನಿಯರ್‌ರವರ ಕಛೇರಿ
## ಪಿ.ಡಬ್ಲ್ಯೂಡಿ. ವಿಭಾಗ, ಶಿವಮೊಗ್ಗ.

### ಸುತ್ತೋಲೆ

ಮಾಹಿತಿ ಹಕ್ಕು ಅಧಿನಿಯಮ 2005 ರ ಸೆಕ್ಷನ್ 5(1)ರ ಅಡಿಯಲ್ಲಿ ಇಲಾಖಾ ಮುಖ್ಯಸ್ಥರ ಅಧೀನಸಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕ್ಷೇತ್ರ ಕಛೇರಿಗಳಲ್ಲಿನ ಕಾರ್ಯ ವಿಧಾನದ ಬಗ್ಗೆ ಸಾರ್ವಜನಿಕರಿಗೆ ಮಾಹಿತಿ ನೀಡಲು ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡಗಳು (ದ) ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ: ಸಿ.ಬಿ.ಎಸ್./ಮಾಹಿತಿ ಹಕ್ಕು ಕೈಪಿಡಿ/2005/ಇಎಸ್.ಎಲ್/05-06/ ದಿ:19.9.2005ರ ಪ್ರಕಾರ ಕಾರ್ಯಪಾಲಕ ಇಂಜಿನಿಯರ್, ಶ್ರೀ ಬಿ.ಟಿ. ಕಾಂತರಾಜು, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ ಶಿವಮೊಗ್ಗ ಇವರು ವಿಶೇಷ ಸಾರ್ವಜನಿಕ ಮಾಹಿತಿ ಅಧಿಕಾರಿ (ಎಸ್.ಪಿ.ಐ.ಓ) ಯಾಗಿ ನೇಮಕಗೊಂಡಿದ್ದು, ಮಾಹಿತಿ ನೀಡುವ ಪ್ರಕ್ರಿಯೆಯು ಸುಲಲಿತವಾಗಿ ನಡೆಯಲು ಅನುಕೂಲವಾಗುವಂತೆ ಶ್ರೀ ಡಿ.ಎಸ್. ಶಿವಕುಮಾರ್, ತಾಂತ್ರಿಕ ಸಹಾಯಕರು, ಶಿವಮೊಗ್ಗ, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ ಇವರನ್ನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಎ.ಪಿ.ಐ.ಓ) ಯಾಗಿ ನೇಮಕಗೊಳಿಸಲಾಗಿದೆ.

**ಬಿ.ಟಿ. ಕಾಂತರಾಜು**
ಕಾರ್ಯಪಾಲಕ ಅಭಿಯಂತರರು,
ಲೋಕೋಪಯೋಗಿ ಇಲಾಖೆ ಶಿವಮೊಗ್ಗ ವಿಭಾಗ, ಶಿವಮೊಗ್ಗ.

### ಕರ್ತವ್ಯದ ಹಾಜರಾತಿ

ಮಾಹಿತಿ ಪಡೆಯುವ ಹಕ್ಕು ಅಧಿನಿಯಮ-2005ರ ಸೆಕ್ಷನ್ 5(1)ರ ಪ್ರಕಾರ ಶ್ರೀ ಬಿ.ಟಿ. ಕಾಂತರಾಜು, ಕಾರ್ಯಪಾಲಕ ಇಂಜಿನಿಯರ್, ಆದ ನಾನು ವಿಶೇಷ ಸಾರ್ವಜನಿಕ ಮಾಹಿತಿ ಅಧಿಕಾರಿ (ಎಸ್.ಪಿ.ಐ.ಓ) ಯಾಗಿ ಕರ್ತವ್ಯ ನಿರ್ವಹಿಸಲು ದಿನಾಂಕ:11.8.2006 ರಂದು ಹೊಣೆಗಾರಿಕೆಯನ್ನು ಒಪ್ಪಿಕೊಂಡಿರುತ್ತೇನೆ.

ಕಾರ್ಯಪಾಲಕ ಇಂಜಿನಿಯರ್,
ಲೋಕೋಪಯೋಗಿ ಇಲಾಖೆ ಶಿವಮೊಗ್ಗ ವಿಭಾಗ, ಶಿವಮೊಗ್ಗ.

### ಕರ್ತವ್ಯದ ಹಾಜರಾತಿ

ಮಾಹಿತಿ ಪಡೆಯುವ ಹಕ್ಕು ಅಧಿನಿಯಮ-2005 ರ ಸೆಕ್ಷನ್ 5(1) ರ ಪ್ರಕಾರ ಶ್ರೀ ಡಿ.ಎಸ್. ಶಿವಕುಮಾರ್, ತಾಂತ್ರಿಕ ಸಹಾಯಕರು, ಆದ ನಾನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಎ.ಪಿ.ಐ.ಓ)ಯಾಗಿ ಕರ್ತವ್ಯ ನಿರ್ವಹಿಸಲು ದಿನಾಂಕ:11.10.2005 ರಂದು ಹೊಣೆಗಾರಿಕೆಯನ್ನು ಒಪ್ಪಿಕೊಂಡಿರುತ್ತೇನೆ.

ತಾಂತ್ರಿಕ ಸಹಾಯಕರು
ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ,
ಲೋಕೋಪಯೋಗಿ ಇಲಾಖೆ ಶಿವಮೊಗ್ಗ ವಿಭಾಗ, ಶಿವಮೊಗ್ಗ.

ಪಿ.ಆರ್. 302

## ಒಳಾಡಳಿತ ಇಲಾಖೆ

### ಅಧಿಸೂಚನೆ

**ಸಂಖ್ಯೆ: ಒಇ 308 ಪೊಸಿಪ 2006, ಬೆಂಗಳೂರು, ದಿನಾಂಕ: 2ನೇ ಮಾರ್ಚ್ 2007**

ಅಧಿಸೂಚನೆ ಸಂಖ್ಯೆ :ಒಇ 95 ಪೊಸಿಪ 2003 ದಿನಾಂಕ :30.7.2005ರಲ್ಲಿ ಡಿವೈ.ಎಸ್.ಪಿ. (ಸಿವಿಲ್) ಹುದ್ದೆಯ ಸ್ವತಂತ್ರ ಪ್ರಭಾರದಲ್ಲಿದ್ದ 199 ಪೊಲೀಸ್ ಅಧಿಕಾರಿಗಳಿಗೆ ಹಾಗೂ ಇಬ್ಬರು ಪೋಲಿಸ್ ಇನ್ಸ್‌ಪೆಕ್ಟರ್ ರವರುಗಳಿಗೆ ಡಿವೈ.ಎಸ್.ಪಿ. (ಸಿವಿಲ್) ಹುದ್ದೆಗೆ, (ವೇತನ ಶ್ರೇಣಿ 7400-13120) ಮುಂಬಡ್ತಿ ನೀಡಲಾಗಿದೆ. ಸದರಿ ಅಧಿಕಾರಿಗಳಿಗೆ ಮುಂಬಡ್ತಿಯನ್ನು ಪರಿಗಣಿಸುವ ಸಂದರ್ಭದಲ್ಲಿ ಇಲಾಖಾ ವಿಚಾರಣೆ ಬಾಕಿ ಇರುವ ಅಧಿಕಾರಿಗಳ ಪದೋನ್ನತಿಯನ್ನು ಸೀಲ್ಡ್ ಕವರ್‌ನಲ್ಲಿ ಇಡಲು ಇಲಾಖಾ ಮುಂಬಡ್ತಿ ಸಮಿತಿ ದಿನಾಂಕ:19.7.2005ರಂದು ನಡೆದ ಸಭೆಯಲ್ಲಿ ತೀರ್ಮಾನಿಸಿತ್ತು. ಈ ಕೆಳಕಂಡ ಸ್ವತಂತ್ರ ಪ್ರಭಾರದ ಮೇಲೆ ಡಿವೈ.ಎಸ್.ಪಿ. (ಸಿವಿಲ್) ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆಯು ಬಾಕಿ ಇದ್ದುದರಿಂದ ಇವರುಗಳನ್ನು ಪದೋನ್ನತಿಗೆ ಪರಿಗಣಿಸಿರುವುದಿಲ್ಲ. ಈ ಅಧಿಕಾರಿಗಳ ವಿರುದ್ಧ ಬಾಕಿ ಇದ್ದ ಇಲಾಖಾ ವಿಚಾರಣೆಗಳು ಪೂರ್ಣಗೊಂಡಿದ್ದು, ವಿಚಾರಣಾಧಿಕಾರಿಗಳು ಅವರುಗಳ ವಿರುದ್ಧ ದೋಷಾರೋಪಣೆ ಸಾಬೀತಾಗಿರುವುದಿಲ್ಲವೆಂದು ವರದಿ ಮಾಡಿದ್ದ ಹಿನ್ನಲೆಯಲ್ಲಿ ಹಾಗೂ ಡಿಜಿ ಮತ್ತು ಐಜಿಪಿ ರವರ ಶಿಫಾರಸ್ಸು ಮತ್ತು ವಿಚಾರಣಾಧಿಕಾರಿಗಳ ಅಂತಿಮ ವರದಿಗಳನ್ನು ಪರಿಗಣಿಸಿ, ಸರ್ಕಾರವು ಈ ಅಧಿಕಾರಿಗಳನ್ನು ಅವರ ವಿರುದ್ಧ ಆದೇಶಿಸಿದ್ದ ಇಲಾಖಾ ವಿಚಾರಣೆಯಲ್ಲಿನ ದೋಷಾರೋಪಣೆಗಳಿಂದ ದೋಷಮುಕ್ತರನ್ನಾಗಿಸಿ ಆದೇಶಗಳನ್ನು ಹೊರಡಿಸಿದೆ.

ಈ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡ ಡಿವೈ.ಎಸ್.ಪಿ. (ಸಿವಿಲ್) ಹುದ್ದೆಯ ಸ್ವತಂತ್ರ ಪ್ರಭಾರದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿಗಳಿಗೆ ಅವರ ಹೆಸರುಗಳ ಮುಂದೆ ನಮೂದಿಸಿರುವ ಅವರಿಗಿಂತ ಸೇವೆಯಲ್ಲಿ ಕಿರಿಯ ಅಧಿಕಾರಿಗಳು ಮುಂಬಡ್ತಿ ಹೊಂದಿರುವ ದಿನಾಂಕವನ್ನು ಆಧರಿಸಿ ಸ್ಥಾನವನ್ನು ನಿಗಧಿಪಡಿಸಿ, ವೇತನ ಶ್ರೇಣಿ ರೂ.7400-13120ರಲ್ಲಿ ಡೆಪ್ಯೂಟಿ ಸೂಪರಿಂಟೆಂಡೆಂಟ್ ಆಫ್ ಪೋಲಿಸ್, ಸಿವಿಲ್ ವೃಂದಕ್ಕೆ ದಿನಾಂಕ:30.7.2005 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಆರ್.ಪಿ.ಪಿ.ಪಿ.) ನಿಯಮಗಳು, 1978ರ ನಿಯಮ 2 ಉಪ ನಿಯಮ (1)(ಎ) ರನ್ವಯ ಈ ಅಧಿಕಾರಿಗಳಿಗಿಂತ ಸೇವೆಯಲ್ಲಿ ಕಿರಿಯರಾದ ಅಧಿಕಾರಿಗಳಿಗೆ ಮುಂಬಡ್ತಿ ನೀಡಿದ ದಿನಾಂಕದಿಂದ ಮುಂಬಡ್ತಿ ನೀಡಲಾಗಿದೆ.

| ಕ್ರ. ಸಂ. | ಪಿ.ಐ.(ಸಿವಿಲ್) ಜೇಷ್ಠತ ಪಟ್ಟಿ ದಿನಾಂಕ ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ಸೇವೆಯಲ್ಲಿನ ಕಿರಿಯ ಅಧಿಕಾರಿ | ಪೂರ್ವಾನ್ವಯ ಬಡ್ತಿಯ ದಿನಾಂಕ | ವೃಂದದಲ್ಲಿನ ಜೇಷ್ಠತಾ ಪಟ್ಟಿ ಕ್ರಮ ಸಂಖ್ಯೆ |
|---|---|---|---|---|---|
| 1 | 779ಏ | ಶ್ರೀಮತಿ ಎನ್.ಎನ್. ಇಂದಿರಾ (779ಏ) | ಶ್ರೀ ಎ.ಆರ್. ಷರೀಫ್ ಪಿ.ಐ. (781) | 30.7.2005 | 65ಏ |
| 2 | 800 | ಶ್ರೀ ವಿ.ಬಿ. ಗಾಂವಕರ್ ಪಿ.ಐ. (800) | ಶ್ರೀ ಕೆ.ಎಸ್. ಮೋಹನ್ (ಪಿ.ಐ.806) | 30.7.2005 | 80ಏ |
| 3 | 868 | ಶ್ರೀ ಜಿ. ರಂಗಸ್ವಾಮಿ, ಪಿಐ (868) | ಶ್ರೀ ಎಸ್.ಕೆ. ಮುಳಸಾವಳಗಿ ಪಿ.ಐ (875) | 30.7.2005 | 133ಏ |
| 4 | 894 | ಶ್ರೀ ಹೆಚ್.ಆರ್. ಮಹದೇವಯ್ಯ (ಪಿಐ.894) | ಶ್ರೀ ಎ. ರಾಜೀವ್ ಪಿ.ಐ. (895) | 30.2.2005 | 151ಏ |

ಈ ಅಧಿಕಾರಿಗಳನ್ನು ಈಗ ಅವರು ಸ್ವತಂತ್ರ ಪ್ರಭಾರದ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಡಿವೈ.ಎಸ್.ಪಿ. (ಸಿವಿಲ್) ಹುದ್ದೆಗಳಲ್ಲಿಯೇ ಮುಂದಿನ ಆದೇಶದವರೆಗೆ ಮುಂದುವರೆಸಲಾಗಿದೆ.

ಕರ್ನಾಟಕ ಲೋಕಸೇವಾ ಆಯೋಗವು ಸಂಖ್ಯೆ:ಪಿಎಸ್‌ಸಿ 162 ಸಿಎನ್‌ಎಸ್ 06 ದಿನಾಂಕ:17.3.2006ರಲ್ಲಿ ನೀಡಿದ ಸಹಮತಿಯನ್ವಯ ಈ ಅಧಿಸೂಚನೆಯನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎ. ಕುಲಕರ್ಣಿ**

ಪಿ.ಆರ್. 303

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೋಲಿಸ್ ಸೇವೆಗಳು)

## ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಶಿಸ್ತು ಪ್ರಾಧಿಕಾರಿಗಳು, ಶಿವಮೊಗ್ಗ ವೃತ್ತ, ಶಿವಮೊಗ್ಗ ಇವರ ಕಛೇರಿಯ ನಡವಳಿಗಳು

**ಕಛೇರಿ ಆದೇಶ ಸಂಖ್ಯೆ: 53 /2006-07 ದಿನಾಂಕ: 28ನೇ ಫೆಬ್ರವರಿ 2007**

**ವಿಷಯ:** ಶ್ರೀ ಎಂ. ಮಧುಕರ, ಅರಣ್ಯ ರಕ್ಷಕ ಇವರ ಅನಧಿಕೃತ ಗೈರು ಹಾಜರಾತಿ ವಿರುದ್ಧ ಇಲಾಖಾ ವಿಚಾರಣೆಯ ಅಂತಿಮ ಆದೇಶ ನೀಡಿಕೆ ಕುರಿತು.

**ಉಲ್ಲೇಖ:**
1. ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ಇವರ ಪತ್ರ ಸಂ:ಎ3 -ಸಿಬ್ಬಂದಿ-ಇಎನ್‌ಕ್ಯೂ-ಆಗೈ-ಸಿಆರ್-408/03-04 ದಿನಾಂಕ 5.6.2004
2. ಆಪಾದಿತ ನೌಕರ ಶ್ರೀ ಎಂ. ಮಧುಕರ, ಅರಣ್ಯ ರಕ್ಷಕ ರವರು ದೋಷಾರೋಪಣೆ ಪಟ್ಟಿಗೆ ನೀಡಿದ ಹೇಳಿಕೆ ದಿನಾಂಕ:7.6.2004
3. ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ಇವರ ಅಧಿಕೃತ ಜ್ಞಾಪನಾ ಪತ್ರದ ಸಂಖ್ಯೆ: ಸಿಬ್ಬಂದಿ-ಅಗೈ-ಸಿಆರ್-408/03-04 ದಿನಾಂಕ:22.6.2004.
4. ವಿಚಾರಣಾಧಿಕಾರಿ ಹಾಗೂ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ಉಪ ವಿಭಾಗ, ಸಾಗರ ಇವರ ವಿಚಾರಣಾ ವರದಿ ದಿನಾಂಕ:21.10.2004.
5. ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ ಇವರ ಕಛೇರಿಯಿಂದ ಅಪಾಧಿತ ನೌಕರರಿಗೆ ಜಾರಿ ಮಾಡಿದ 2ನೇ ಕಾರಣ ಕೇಳಿ ನೋಟೀಸು ದಿನಾಂಕ:11.8.2006.
6. ಆಪಾದಿತ ನೌಕರರಾದ ಶ್ರೀ ಎಂ. ಮಧುಕರ, ಅರಣ್ಯ ರಕ್ಷಕ ಇವರು 2ನೇ ಕಾರಣ ಕೇಳಿ ನೋಟೀಸು ದಿ:11.8.2006 ಕ್ಕೆ ನೀಡಿದ ಪ್ರತಿ ರಕ್ಷಣೆಯ ಹೇಳಿಕೆ ದಿ:6.9.2006.

**ಪ್ರಸ್ತಾವನೆ:**

ಶ್ರೀ ಎಂ. ಮಧುಕರ ಅರಣ್ಯ ರಕ್ಷಕ ಇವರ ವಿರುದ್ದ ಕರ್ನಾಟಕ ಸಿವಿಲ್ ಸರ್ವೀಸ್ ನಿಯಮ 106 (ಎ) ಅನ್ವಯ ಅನಧಿಕೃತ ಗೈರು ಹಾಜರಿಯ ಆರೋಪದ ಮೇಲೆ ಶಿಸ್ತು ಕ್ರಮ ಕೈಗೊಳ್ಳಲು ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ಇವರು ಉಲ್ಲೇಖ (1)ರ ನೋಟೀಸಿನಲ್ಲಿ ದೋಷಾರೋಪಣಾ ಪಟ್ಟಿಯನ್ನು ನೀಡಲಾಗಿದ್ದು ಆಪಾದಿತ ನೌಕರರು ಉಲ್ಲೇಖ (2)ರ ಪತ್ರದಲ್ಲಿ ನೀಡಿದ ಸಮಾಜಾಯಿಷಿಯಲ್ಲಿ ತಮ್ಮ ವಿರುದ್ಧದ ಆಪಾದನೆಗಳನ್ನು ಅಲ್ಲಗಳೆದಿರುವುದರಿಂದ ಆಪಾದನೆಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ಇವರು ಉಲ್ಲೇಖ (3)ರಲ್ಲಿ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ಉಪ ವಿಭಾಗ, ಸಾಗರ ಇವರನ್ನು ಸಿ.ಸಿ.ಎ. ನಿಯ,ಮ 11(2)ರನ್ವಯ ವಿಚಾರಣಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿದ್ದು, ವಿಚಾರಣಾಧಿಕಾರಿಗಳು ಕೂಲಂಕಷವಾಗಿ ವಿಚಾರಣೆ ನಡೆಸಿ ಆಪಾದನೆಗಳು ರುಜುವಾತು ಆಗಿರುತ್ತದೆಂಬ ಫಲಿತಾಂಶದೊಂದಿಗೆ ಉಲ್ಲೇಖ(4)ರಲ್ಲಿ ವಿಚಾರಣಾ ವರದಿಯನ್ನು ಮಂಡಿಸಿರುತ್ತಾರೆ.

2. ವಿಚಾರಣಾಧಿಕಾರಿಗಳ ವರದಿಯ ಕುರಿತು ಅಂತಿಮ ನಿರ್ಣಯ ತೆಗೆದುಕೊಳ್ಳುವ ಮುನ್ನ ಸಿಸಿಎ ನಿಯಮ 11(ಎ)ರನ್ವಯ ಈ ಪ್ರಕರಣದಲ್ಲಿ ಆಪಾದಿತ ನೌಕರರಿಗೆ ಇಲಾಖಾ ವಿಚಾರಣಾ ವರದಿಯ ಪ್ರತಿಯನ್ನು ಉಲ್ಲೇಖ (5)ರ ಪತ್ರದ ದಿ:11.8.2006ರ ಮೂಲಕ ಒದಗಿಸಿ ವಿಚಾರಣಾ ವರದಿಯನ್ನು ಅಂಗೀಕರಿಸುವ ಬಗ್ಗೆ ಎರಡನೇ ಕಾರಣ ಕೇಳಿ ತಿಳುವಳಿಕೆ ಪತ್ರವನ್ನು ನೀಡಿದ್ದು. ಆಪಾದಿತರು ಅವರ ಹೇಳಿಕೆಯನ್ನು ನೋಟೀಸು ತಲುಪಿದ 15 ದಿವಸಗಳೊಳಗಾಗಿ ಸಲ್ಲಿಸುವಂತೆ ಅವರಿಗೆ ತಿಳಿಸಲಾಗಿತ್ತು.ಆಪಾದಿತ ಸರ್ಕಾರಿ ನೌಕರರು ಸದರಿ ನೋಟೀಸನ್ನು ದಿ:22.8.2006 ರಂದು ಪಡೆದುಕೊಂಡು, ಉಲ್ಲೇಖ (6)ರ ಪತ್ರದಲ್ಲಿ ಅವರ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದು ಅವರಿಂದ ಪಡೆದ ರಕ್ಷಣಾ ಹೇಳಿಕೆಯನ್ನು ಪರಿಶೀಲಿಸಲಾಗಿದೆ. ಸದರಿ ಆಪಾದಿತ ನೌಕರರ ದಿ:15.12.1997 ರಿಂದ 12.5.2004ರ ವರೆಗೆ ಒಟ್ಟು 2340 (6 ವರ್ಷ 4 ತಿಂಗಳು 29 ದಿನ) ದಿನಗಳ ಗೈರು ಹಾಜರಿಯ ಸಂಬಂಧವಾಗಿ, ವಿಚಾರಣಾಧಿಕಾರಿಗಳ ವರದಿಯ ಕುರಿತು ಅಂತಿಮ ನಿರ್ಣಯ ತೆಗೆದುಕೊಳ್ಳುವ ಬಗ್ಗೆ ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳಬೇಕಾಗಿರುತ್ತದೆ.

ಅ) ವಿಚಾರಣೆಯ ಸಮಯದಲ್ಲಿ ವಿಚಾರಣಾಧಿಕಾರಿಗಳು ಕೆಸಿಎಸ್ (ಸಿಸಿಎ) ನಿಯಮ, 11(7) ರಿಂದ (23)ರಲ್ಲಿ ನಿರೂಪಿಸಿದ ವಿಧಿ ವಿಧಾನಗಳನ್ನು ಅನುಸರಿಸಿರುತ್ತಾರೆಯೇ?

ಆ) ನಿಯಮ 11ರ ರೀತ್ಯಾ ವಿಧಿ ವಿಧಾನಗಳನ್ನು ಅನುಸರಿಸಿಲ್ಲವಾದಲ್ಲಿ ಯಾವುದೇ ನ್ಯೂನತೆಯು ಆಪಾದಿತ ನೌಕರರ ಸ್ವ-ಸಮರ್ಥನೆಯ ಮೇಲೆ ಪ್ರತಿಕೂಲ ಪರಿಣಾಮ ಉಂಟು ಮಾಡುವಂತಹದ್ದಾಗಿವೆಯೇ?

ಇ) ವಿಚಾರಣಾಧಿಕಾರಿಗಳು ನೀಡಿದ ಫಲಿತಾಂಶವು ವಿಚಾರಣೆಯ ಸಮಯದಲ್ಲಿ ಹಾಜರುಪಡಿಸಿದ ವಿವಿಧ ದಾಖಲೆಗಳು, ಸಾಕ್ಷಿಗಳ ಹೇಳಿಕೆಗಳು, ವಾದ ಪ್ರತಿವಾದ ಇವುಗಳು ಪರಸ್ಪರ ತುಲನೆಯಿಂದ ಕೂಡಿದವುಗಳಾಗಿವೆಯೇ? ಮತ್ತು

ಈ) ಈ ವಿಚಾರಣಾ ವರದಿ ಹಾಗೂ ಫಲಿತಾಂಶ ಸ್ವೀಕಾರಾರ್ಹವೇ?

(i) ವಿಚಾರಣೆ ದಾಖಲೆಗಳನ್ನು ಪರಿಶೀಲಿಸುವಾಗ ವಿಚಾರಣಾಧಿಕಾರಿಗಳು ಆಪಾದಿತ ನೌಕರರಿಗೆ ಆಪಾದನೆಗಳಿಗೆ ಸಂಬಂಧವಿರುವ ಹೆಚ್ಚಿನ ದಾಖಲೆಗಳನ್ನು ಪರಿಶೀಲಿಸಲು ಅವಕಾಶ ನೀಡಿರುವುದು ಸಾಕ್ಷಿಗಳ ಹೇಳಿಕೆಗಳನ್ನು ಅಪಾದಿತ ನೌಕರರ ಸಮಕ್ಷಮ ಪಡೆದಿರುವುದು. ಪ್ರತಿ ಸವಾಲು ಹಾಕಲು ಅವಕಾಶ ನೀಡಿರುವುದು, ಆಪಾದಿತ ನೌಕರರಿಗೆ ತಮ್ಮ ಪರವಾಗಿ ಸಾಕ್ಷಿಗಳನ್ನು ಹಾಜರುಪಡಿಸಲು ಅವಕಾಶ ನೀಡಿರುವುದು, ಮಂಡನಾಧಿಕಾರಿಗಳ ಲಿಖಿತ ವಾದದ ಸಾರಾಂಶವನ್ನು ಆಪಾದಿತ ನೌಕರರಿಗೆ ಒದಗಿಸಿರುವುದು ವ್ಯಕ್ತವಾಗಿದ್ದು, ಇದರಿಂದ ಪ್ರಶ್ನೆ (ಅ)ಗೆ "ಹೌದು" ಎಂದು ಪ್ರಶ್ನೆ (ಆ)ಗೆ "ಉದ್ಭವಿಸುವುದಿಲ್ಲವೆಂದೂ" ಉತ್ತರವನ್ನು ಕಂಡುಕೊಳ್ಳಲಾಗಿದೆ.

(ii) ಆಪಾದಿತ ನೌಕರರ ವಿರುದ್ಧದ ಆಪಾದನೆಯ ಅನಧಿಕೃತ ಗೈರುಹಾಜರಾತಿಗೆ ಸಂಬಂಧಿಸಿದ್ದಾಗಿದ್ದು ಅವರು ಶಿಕಾರಿಪುರ ವಲಯದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ 1997ನೇ ಸಾಲಿನಲ್ಲಿ ಇವರನ್ನು ಕಾರ್ಗಲ್ ವಲಯಕ್ಕೆ ವರ್ಗಾವಣೆ ಮಾಡಿದ್ದು. ಈ ನೌಕರರು ಕಾರ್ಗಲ್ ವಲಯ ಕಛೇರಿಗೆ ದಿನಾಂಕ:15.12.1997 ರಂದು ಕಾರ್ಯ ವರದಿ ಮಾಡಿಕೊಂಡಿದ್ದು ಈ ನೌಕರರಿಗೆ ಆಗಿನ ಕಾರ್ಗಲ್ ವಲಯ ಅರಣ್ಯಾಧಿಕಾರಿಗಳು ಪ್ರಭಾರ ವಹಿಸಿಕೊಂಡು ವರದಿ ನೀಡಲು ಸೂಚಿಸಿದ್ದಾಗ್ಯೂ ಈ ನೌಕರರು ವರ್ಗಾಯಿಸಿದ ಸ್ಥಳದ ಪ್ರಭಾರವನ್ನು ವಹಿಸಿಕೊಳ್ಳದೆ ಸಕ್ಷನ ಪ್ರಾಧಿಕಾರಿಯ ಪೂರ್ವಾನುಮತಿ ಪಡೆಯದೆ ಸರ್ಕಾರಿ ಕೆಲಸಕ್ಕೆ ಗೈರು ಹಾಜರಿಯಾಗಿದ್ದು ಇವರು ವಿಚಾರಣೆಯ ಸಮಯದಲ್ಲಿ ಇವರ ದೀರ್ಘ ಕಾಲದ ಗೈರು ಹಾಜರಿ ಅಂದರೆ ದಿನಾಂಕ :15.12.1997 ರಿಂದ 12.5.2004ರ ವರೆಗೆ ಒಟ್ಟು 2340(6ವರ್ಷ4 ತಿಂಗಳು 29 ದಿನ) ಯಾವುದೇ ಸಕಾರಣವನ್ನು ದಾಖಲಾತಿಗಳ ಮೂಲಕ ಅಥವಾ ಸಾಕ್ಷಿಗಳ ಮುಖಾಂತರ ನೀಡಿರುವುದಿಲ್ಲ ಅಲ್ಲದೇ ವಿಚಾರಣೆಯ ನಂತರ ಪ್ರತಿವಾದವನ್ನು ಸಹ ಸಲ್ಲಿಸಿರುವುದಿಲ್ಲ ವಿಚಾರಣೆಯಲ್ಲಿ ಬಂದ ಸಾಕ್ಷಿಗಳ ಹೇಳಿಕೆ ಹಾಗೂ ಪ್ರದರ್ಶಿತ ದಾಖಲೆಗಳಿಂದ ಸದರಿ ನೌಕರರ ದೀರ್ಘಕಾಲದ ಅನಧಿಕೃತ ಗೈರುಹಾಜರಿ ಹಾಗೂ ಕರ್ತವ್ಯ ನಿರ್ಲಕ್ಷ್ಯತೆ ಆಪಾದನೆಗಳು ರುಜುವಾತು ಆಗಿರುತ್ತವೆ ಎಂದು ವಿಚಾರಣಾಧಿಕಾರಿಗಳು ಫಲಿತಾಂಶ ನೀಡಿದ್ದು ಇದು ಪ್ರಶ್ನೆ (ಇ) ಮತ್ತು (ಈ)ಗೆ ಉತ್ತರವಾಗಿರುತ್ತದೆ.

3. ವಿಚಾರಣೆಯ ದಾಖಲಾತಿಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ ಈ ಕೆಳಕಂಡ ಅಂಶಗಳು ಶಿಸ್ತುಪ್ರಾಧಿಕಾರಿಯ ಗಮನಕ್ಕೆ ಬಂದಿರುತ್ತದೆ.

1) ಆಪಾದಿತ ನೌಕರರು ವಿಚಾರಣೆಯ ಸಮಯದಲ್ಲಿ ವಿಚಾರಣಾ ಪ್ರಾಧಿಕಾರಿಯ ಮುಂದೆ ಯಾವುದೇ ಸಾಕ್ಷ್ಯ ದಾಖಲಾತಿಗಳನ್ನು ಸಲ್ಲಿಸದೆ ಪ್ರತ್ಯೇಕವಾಗಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ಇವರ ಕಛೇರಿಗೆ ಕೆಲವು ಪತ್ರ ವ್ಯವಹರಿಸಿದ್ದು ಅದರ ಪ್ರಕಾರ ಈ ನೌಕರರು ಇವರ ಆರೋಗ್ಯ ಸರಿಯಿಲ್ಲದೆ Optio Athytis ಕಾಯಿಲೆಯಿಂದ ದಿನಾಂಕ :1.2.2002 ರಿಂದ 12.5.2004 ರವರೆಗೆ ಒಟ್ಟು 832 (2 ವರ್ಷ 3 ತಿಂಗಳು 12 ದಿನ) ದಿನಗಳವರೆಗೆ ಅನಾರೋಗ್ಯದಿಂದ ಬಳಲಿರುವ ಬಗ್ಗೆ ಮಾಸೂರಿನ ಸರ್ಕಾರಿ ವೈದ್ಯಾಧಿಕಾರಿಗಳಿಂದ ಮಾಹಿತಿಯನ್ನು ಪಡೆದು ದೃಢಪಡಿಸಿಕೊಳ್ಳಲಾಗಿದ್ದು ಈ ಅವಧಿಯು ಗೈರುಹಾಜರಿಯ ಸಂಬಂಧವಾಗಿ ಸಾಂದರ್ಭಿಕ ಸಾಕ್ಷ್ಯಾಧಾರಗಳಿಂದ ಒಪ್ಪಿಕೊಳ್ಳಬಹುದಾಗಿರುತ್ತದೆ. ಅನಾರೋಗ್ಯದ ಪೂರ್ವದಲ್ಲಿಯು ದಿನಾಂಕ:15.12.1997 ರಿಂದ 31.1.2002 ರವರೆಗೆ ಒಟ್ಟು 1508 (4 ವಷ 1 ತಿಂಗಳು 17 ದಿನ) ದಿನಗಳವರೆಗಿನ ದೀರ್ಘಕಾಲದ ಅನಧಿಕೃತ ಗೈರು ಹಾಜರಿಯ ಅವಧಿಯಲ್ಲಿ ಆಪಾದಿತ ನೌಕರರು ಆರೋಗ್ಯದಿಂದಿದ್ದು ಅವರ ತಂದೆ, ತಾಯಿ ಮತ್ತು ಮಗಳು ಮರಣ ಹೊಂದಿದ ಬಗ್ಗೆ ಮಾನಸಿಕ ನೋವು ಉಂಟಾದ ಕಾರಣ ಕೆಲಸಕ್ಕೆ ಹಾಜರಾಗಲಿಲ್ಲವೆಂದು ವಿವರಿಸುತ್ತಾರೆ.

2) ಆಪಾದಿತ ನೌಕರರಿಗೆ ರಜೆಯ ತೀರ ಅವಶ್ಯಕತೆಯಿದಿದ್ದರೆ ಕೆ.ಸಿ.ಎಸ್. ನಿಯಮ 175(1)ರ ಅನ್ವಯ ರಜಾ ಅರ್ಜಿ ಪ್ರಪತ್ರವನ್ನು ಅವರ ನಿಯಂತ್ರಣಾಧಿಕಾರಿಗಳಿಗೆ ಒಪ್ಪಿಸಿ ಸೂಕ್ತ ಮಂಜೂರಾತಿಯನ್ನು ಪಡೆದುಕೊಳ್ಳಬಹುದಾಗಿತ್ತು ಹಾಗೂ

ಇವರು ಮಾನಸಿಕ ಅಸ್ವಸ್ಥತೆಯ ಬಗ್ಗೆ ಯಾವುದೇ ಅಧಿಕೃತ ವೈದ್ಯಾಧಿಕಾರಿಗಳಿಂದ ಪ್ರಮಾಣಿಕೃತ ಪತ್ರಗಳನ್ನು ಪಡೆದು ವಿಚಾರಣೆಯ ಸಮಯದಲ್ಲಿ ಹಾಜರುಪಡಿಸಿರುವುದಿಲ್ಲ. ಇವರು ದಿನಾಂಕ:15.12.97 ರಿಂದ ದಿನಾಮಕ:31.1.2002ರ ವರೆಗೆ 1508 (4 ವರ್ಷ 1 ತಿಂಗಳು 17 ದಿನಗಳ ಅನಧಿಕೃತ ಗೈರುಹಾಜರಿಯಲ್ಲಿ) ಅಸ್ವಸ್ಥತೆಯಿಂದ ಇದ್ದರು ಎಂಬುದು ಸುಳ್ಳಿನ ಸಂಗತಿಯಾಗಿರುತ್ತದೆ. ಏಕೆಂದರೆ ಇಷ್ಟು ದೀರ್ಘಕಾಲದಲ್ಲಿ ಒಂದು ದಿನವಾದರು ಅವರ ಪತ್ನಿಯಾಗಲಿ ಅವರ ನಿಕಟ ಸಂಬಂಧಿಗಳಾಗಲಿ ಕಾರ್ಗಲ್ ವಲಯ ಕಛೇರಿಗೆ ಅಥವಾ ಇಲಾಖೆಯ ಕೇಂದ್ರ ಕಛೇರಿಗಾಗಲಿ ಸಂಪರ್ಕಿಸಿದ್ದಾಗಲಿ ಅಥವಾ ಈ ಬಗ್ಗೆ ವಿಷಯ ತಿಳಿಸಲು ಪ್ರಯತ್ನಸಿದ್ದಾಗಲಿ, ರಜೆ ಅರ್ಜಿ ಕಳುಹಿಸಿದ್ದಾಗಲೀ ಮಾಡಿರುವುದಿಲ್ಲ. ಇದಕ್ಕೆ ಬದಲಾಗಿ ಇಲಾಖೆಯ ವತಿಯಿಂದಲೇ ಸದರಿ ಆಪಾದಿತ ನೌಕರರಿಗೆ ಕರ್ತವ್ಯಕ್ಕೆ ಮರಳುವಂತೆ ಮಾಡಿದ ಎಲ್ಲಾ ಪ್ರಯತ್ನಗಳು ಫಲಕಾರಿಯಾಗದ ಕಾರಣ ಅಂತಿಮವಾಗಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ರವರು ತಿಳುವಳಿಕೆ ಪತ್ರವನ್ನು 1957 ಕೆ.ಸಿ.ಎಸ್ (ಸಿ.ಸಿ.ಎ) ನಿಯಮ 29(A) (d) ಅನ್ವಯ ಸಾಗರ ವಾರ್ತಾ ಪತ್ರಿಕೆ ಮತ್ತು ವಿಜಯ ಕರ್ನಾಟಕ ದಿನ ಪತ್ರಿಕೆಗಳಲ್ಲಿ ಕ್ರಮವಾಗಿ ದಿನಾಂಕ: 5.5.2004 ಮತ್ತು 7.5.2004 ರಂದು ಪ್ರಕಟಿಸಲಾಗಿದ್ದು ಸದರಿ ಆಪಾದಿತ ನೌಕರರು ದಿನಾಂಕ:13.5.2004 ರಂದು ವಿಭಾಗ ಕಛೇರಿಯಲ್ಲಿ ಕರ್ತವ್ಯದ ಮೇಲೆ ಹಾಜರಾಗಿರುತ್ತಾರೆ. ಸದರಿ ಆಪಾದಿತ ನೌಕರರ ವಿರುದ್ಧ ಶಿಸ್ತು ಕ್ರಮ ಜರುಗಿಸಲಾಗಿದ್ದು, ಅವರನ್ನು ಕೆಲಸದಿಂದ ತೆಗೆದು ಹಾಕದಿದ್ದ ಕಾರಣ ಸರ್ಕಾರದ ಆದೇಶ ಕ್ರಮ ಸಂಖ್ಯೆ:ಸಿಆಸುಇ 4 ಸೇಇವಿ 89 ದಿನಾಂಕ:31.1.1989ರ ಖಂಡಿಕೆ (3)ರ ಅನುಸಾರ ಸದರಿ ನೌಕರರಿಗೆ ಕೆಲಸದ ಮೇಲೆ ತೆಗೆದುಕೊಳ್ಳಲಾಗಿರುತ್ತದೆ. ಸದರಿ ಆಪಾದಿತ ನೌಕರನು ದಿನಾಂಕ:15.12.1997 ಕ್ಕಿಂತ ಪೂರ್ವದಲ್ಲಿ ದಿನಾಂಕ:1.6.1995 ರಿಂದ 11.6.1995 ಹಾಗೂ 18.6.1995 ರಿಂದ 29.6.1995 ವರೆಗೆ ಒಟ್ಟು 23 ದಿನಗಳು ಗೈರು ಹಾಜರಾಗಿದ್ದು.

ಮತ್ತು ನಂತರ ದಿನಾಂಕ:1.7.1995 ರಿಂದ 28.8.1995 ರ ವರೆಗೆ ಒಟ್ಟು 57 ದಿನಗಳ ಗೈರು ಹಾಜರಿಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರರವರ ಕಛೇರಿಯ ಆದೇಶ ಸಂಖ್ಯೆ:129/97-98 ದಿನಾಂಕ 23.1.1998ರ ಮೂಲಕ ವೇತನ ರಹಿತ ರಜೆಯೆಂದು ಪರಿಗಣಿಸಲಾಗಿರುತ್ತದೆ. ಈ ಮಾಹಿತಿಯು ಇವರ ಸೇವಾಪುಸ್ತಕದಿಂದ ವ್ಯಕ್ತವಾಗಿದ್ದು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ನರಸಿಂಹರಾಜು ವಿರುದ್ಧ ರಾಜ್ಯ ಪ್ರಕರಣದಲ್ಲಿ (KSLJ 821/93) ಪುನಃ ಪುನಃ ಗೈರು ಹಾಜರಾಗುವ ಸರ್ಕಾರಿ ನೌಕರನೊಬ್ಬನ ಪ್ರಕರಣದಲ್ಲಿ ಅಂತಹ ಗೈರು ಹಾಜರಿಯು ಅರ್ಜಿದಾರನು ಸೇವೆಗೆ ಸೂಕ್ತವಲ್ಲವೆಂದು ಪರಿಗಣಿಸಲು ಉತ್ತಮ ಆಧಾರವಾಗುತ್ತದೆಂದು ತೀರ್ಪು ನೀಡಿದೆ. ಈ ತೀರ್ಪು ಸರ್ವೋಚ್ಛ ನ್ಯಾಯಾಲಯವು ಸಂಶೇರ್ ಸಿಂಘ್ ವಿರುದ್ಧ ಪಂಜಾಬ್ ರಾಜ್ಯ (1974 (2) SCC N. 31) ಪ್ರಕರಣದಲ್ಲಿ ನೀಡಿರುವ ತೀರ್ಪಿನಿಂದ ಬೆಂಬಲವನ್ನು ಪಡೆದಿರುತ್ತದೆ ಈ ಪ್ರಕರಣದಲ್ಲೂ ಸಹ ಸದರಿ ಆಪಾದಿತ ನೌಕರರು ಸಹ ಪದೇ ಪದೇ ಕೆಲಸದಲ್ಲಿ ಗೈರು ಹಾಜರಾಗಿದ್ದು ಸದರಿ ಆಪಾದನೆಗಳು ರುಜುವಾತಾಗಿರುತ್ತವೆ. ಅಲ್ಲದೇ, ಈ ನೌಕರರು ದಿನಾಂಕ:6.5.1976 ರಂದು ಅರಣ್ಯ ರಕ್ಷಕರಾಗಿ ಕರ್ತವ್ಯಕ್ಕೆ ಸೇರಿದ್ದು ಈ ದಿನಾಂಕದವರೆಗೂ ಸದರಿ ಆಪಾದಿತ ನೌಕರರ ಪರಿವೀಕ್ಷಣಾ ಅವಧಿಯು ಕೆ.ಸಿ.ಎಸ್. (ಪರೀಕ್ಷಾರ್ಥ) ನಿಯಮ 12(1)(3) ನ್ನು 5(1)(a) ರ ಜೊತೆಗೆ ಓದಿಕೊಂಡಂತೆ ತೃಪ್ತಿಕರವೆಂದು ಘೋಷಣೆಯಾಗಿರುವುದಿಲ್ಲ ಇವರ ಅನಧಿಕೃತ ಗೈರು ಹಾಜರಾತಿಯಿಂದ ಇವರನ್ನು ಇಲಾಖೆಯಲ್ಲಿ ಯಾವ ಉದ್ದೇಶಕ್ಕೆ ನೇಮಿಸಿಕೊಳ್ಳಲಾಗಿತ್ತೋ ಆ ಉದ್ದೇಶ ಸಫಲವಾಗಿಲ್ಲ. ಆದ್ದರಿಂದ ಇವರು ಹೊಂದಿರುವ ಅರಣ್ಯ ರಕ್ಷಕ ಹುದ್ದೆಯಲ್ಲಿ ಮುಂದುವರೆಯಲು ಆಸಕ್ತಿ ಹೊಂದಿಲ್ಲ ಎಂಬುದು ಸಹ ಸ್ಪಷ್ಟವಾಗಿದೆ. ಈ ಹಿನ್ನಲೆಯಲ್ಲಿ ಈ ನೌಕರರ ದಿನಾಂಕ:15.12.1997 ರಿಂದ 31.1.2002ರ ವರೆಗೆ ಒಟ್ಟು 1508 (4ವರ್ಷ 1 ತಿಂಗಳು 17 ದಿನ) ದಿನಗಳವರೆಗಿನ ದೀರ್ಘಕಾಲದ ಅನಧಿಕೃತ ಗೈರು ಹಾಜರಿಯು ಸಾಬೀತವಾಗಿದೆ ಎಂದು ನಿರ್ಣಯಿಸಲಾಗಿದೆ. ಮೇಲೆ ವಿವರಿಸಿದಂತೆ ಆಪಾದಿತ ಸರ್ಕಾರಿ ನೌಕರರ ಮೇಲೆ ಹೊರಡಿಸಲಾಗಿರುವ ಆರೋಪವು ಸಾಬೀತಾಗಿದ್ದು ತೀವ್ರತರವಾದ ದುರ್ನಡತೆಯಾಗಿದ್ದು ಕೆ.ಸಿ.ಎಸ್. ನಿಯಮ 108ರ ಪ್ರಕಾರ ನಾಲ್ಕು ತಿಂಗಳು ಅಥವಾ ಅದಕ್ಕೂ ಹೆಚ್ಚು ಅವಧಿಯವರೆಗೆ ಕರ್ತವ್ಯದಿಂದ ಗೈರುಹಾಕರಾದರೆ ಅಂತಹ ನೌಕರರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಬಹುದಾಗಿದೆ ಅಥವಾ ತೆಗೆದು ಹಾಕಬಹುದಾಗಿದೆ. ಆಪಾದಿತ ನೌಕರರು ವಿಚಾರಣೆಯಲ್ಲಿ ಮತ್ತು ಉಲ್ಲೇಖ (6)ರ ರಕ್ಷಣಾ ಹೇಳಿಕೆಯಲ್ಲಿ ಪ್ರತಿವಾದಿಸಿರುವ ವಿವಾದಾಂಶಗಳು ಪರಿಗಣನೆಗೆ ಅರ್ಹವಲ್ಲ ಅವರ ಮೇಲಿನ ರುಜುವಾತಾಗಿರುವ ಆರೋಪಗಳು ಸಾಕ್ಷ್ಯಾಧಾರ ಸಹಿತವಾಗಿರುತ್ತವೆ.

ಈ ಪ್ರಕರಣದಲ್ಲಿ ಶ್ರೀ ಎಂ. ಮಧುಕರ, ಅರಣ್ಯ ರಕ್ಷಕ ಇವರು ಸುಮಾರು ನಾಲ್ಕು ವರ್ಷ ಕ್ಕಿಂತಲೂ ಹೆಚ್ಚಿನ ಅವಧಿಗೆ ಅನಧಿಕೃತ ಗೈರು ಹಾಜರಾಗಿರುವುದರಿಂದ ಆಪಾಧಿತ ನೌಕರರ ಮೇಲಿನ ಈ ಅನಧಿಕೃತ ಗೈರು ಹಾಜರಾತಿ ಹಾಗೂ ದುರ್ನಡತೆ ಆರೋಪ ಸಾಬೀತಾಗಿರುತ್ತದೆ. ಆದುದರಿಂದ ಕೆ.ಸಿ.ಎಸ್. ಸಿಸಿಏ ನಿಯಮ 8ರ ದಂಡನೆಗಳಲ್ಲಿ ಈ ಕೆಳಕಂಡ ಗುರುದಂಡನೆಯನ್ನು ವಿಧಿಸಲು ನಿರ್ಧರಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ 1957 ಕೆ.ಸಿ.ಎಸ್. (ಸಿಸಿಏ) ನಿಯಮ-11 ಮತ್ತು 11A ಯನ್ನು ಓದಿಕೊಂಡಂತೆ ಅದೇ ನಿಯಮಗಳ ನಿಯಮ 9(3)ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರಿ ಪಿ.ಎಲ್. ಬೂದಿಹಾಳ್, ಭಾ.ಆ.ಸೇ, ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ಆದ ನಾನು ಶ್ರೀ ಎಂ. ಮಧುಕರ, ಅರಣ್ಯ ರಕ್ಷಕ ಇವರನ್ನು ಕೆ.ಸಿ.ಎಸ್. (ಸಿಸಿಏ) ನಿಯಮ 8 (vi) ರನ್ವಯ ಕಡ್ಡಾಯ ನಿವೃತ್ತಿ (Compulsory Retirement) ದಂಡನೆಯನ್ನು ವಿಧಿಸಿರುತ್ತೇನೆ.

ಸದರಿ ನೌಕರರ ದಿನಾಂಕ:15.12.1997 ರಿಂದ 31.1.2002ರ ವರೆಗೆ ಒಟ್ಟು 1508 (4ವರ್ಷ 1 ತಿಂಗಳು 17 ದಿನ) ದಿನಗಳವರೆಗಿನ ದೀರ್ಘಕಾಲದ ಅನಧಿಕೃತ ಗೈರು ಹಾಜರಿಯ ಅವಧಿಯನ್ನು Karnataka Civil Service Rule 106 A ಹಾಗೂ Rule -8 (14A) ಅನ್ವಯ ಲೆಕ್ಕಕ್ಕಿಲ್ಲದ ಅವಧಿ (Dies-non-service ) ಎಂದು ಪರಿಗಣಿಸಿ ಆದೇಶಿಸಿದೆ. ಹಾಗೂ ದಿನಾಂಕ:1.2.2002 ರಿಂದ 12.5.2004ರ ವರೆಗಿನ 832 ದಿನಗಳು (2 ವರ್ಷ 3 ತಿಂಗಳು 12 ದಿನ) ಅನಾರೋಗ್ಯದ ಅವಧಿಯನ್ನು ಅವರ ಹಕ್ಕಿನಲ್ಲಿರುವ ರಜೆಗಳನ್ನಾಗಿ ಪರಿಗಣಿಸಲು ಒಂದು ವೇಳೆ ರಜೆಗಳಿಲ್ಲದಿದ್ದಲ್ಲಿ ವೇತನ ರಹಿತ ರಜೆಗಳೆಂದು ಪರಿಗಣಿಸಲು ಆದೇಶಿಸಿದೆ.

ಈ ಆದೇಶದ ಮುಖ್ಯಾಂಶವನ್ನು ನೌಕರರ ಸೇವಾಪುಸ್ತಕದ ಭಾಗ–IV ರಲ್ಲಿ ಕೆಂಪು ಶಾಹಿಯಲ್ಲಿ ದಾಖಲು ಪಡಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ.ಎಲ್. ಬೂದಿಹಾಳ್, ಭಾಅಸೇ,**

ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಶಿಸ್ತು ಪ್ರಾಧಿಕಾರಿ,

ಶಿವಮೊಗ್ಗ ವೃತ್ತ, ಶಿವಮೊಗ್ಗ

ಪಿ.ಆರ್. 304

**OFFICE OF THE JOINT COMMISSIONER OF COMMERCIAL TAXES, DIVISIONAL VAT OFFICE, MANGALORE.**

**(Notified Authority under KVAT Act 2003)**

**NOTIFICATION**

**No. 1/JCCT (M) /2006-07 Dated :26th February 2007**

By virtue of the provisions of Rule 157 (2)(g) of the KVAT Rule 2005, it is hereby notified for general information that the declaration in VAT Form 505 shown below are declared to be obsolete and invalid.

| Sl. No. | Name of the declaration Form declared obsolete and invalid | Name & Address of the dealer to whom forms were issued by the Department | To whom the Forms were issued by the dealer | Date from which declare obsolete & Reasons | Name of the Circle issuing the Form | Reasons |
|---|---|---|---|---|---|---|
| 1 | VAT-505 Bearing Sl. No. 0282335-0282336 | M/s Kohinoor Trading Co., Casa Granda, Attavara, Mangalore. TIN - 29850266731 | Blank | 15.2.2007 lost | L.V.O-270, Mangalore | Lost |

Joint Commissioner of Commercial Taxes

D.V.O. Mangalore Division, Mangalore.

P.R. 308

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಚಿತ್ರದುರ್ಗ**

**ಫಾರಂ ನಂ 7**

**38ನೇ ರೂಲು (2)(ಸಿ)**

**ಸ್ಥಿರ ಸ್ವತ್ತುಗಳ ಜಪ್ತಿ ನೋಟೀಸು**

**ಸಂಖ್ಯೆ: 793/06–07 ದಾವಾ ನಂ:341:2003–04 ಈ.ಪಿ.ನಂ 149/06–07**

ಚಿತ್ರದುರ್ಗ ಜಿಲ್ಲಾ ಚಳ್ಳಕೆರೆ ತಾಲ್ಲೂಕಿನ ಚಳ್ಳಕೆರೆ ನಗರದಲ್ಲಿರುವ ಉಜ್ಜನಿ ಸಿದ್ದೇಶ್ವರ ಆಯಿಲ್ ಇಂಡಸ್ಟ್ರೀಸ್ ಬೆಂಗಳೂರು ರಸ್ತೆ ಚಳ್ಳಕೆರೆ ಇದರ ಪಾಲುದಾರರಾದ (1)ಯು ಚಿದಾನಂದ ಮೂರ್ತಿ ಬಿನ್ ಉಚ್ಚಿನಪ್ಪ ಹೊಟ್ಟೆಪ್ಪನ ಹಳ್ಳಿ (2) ಯು. ತಿಪ್ಪೇಸ್ವಾಮಿ ಬಿನ್ ಉಚ್ಚಿನಪ್ಪ ಹೊಟ್ಟೆಪ್ಪನ ಹಳ್ಳಿ (3) ಸಿದ್ದಮ್ಮ ಕೋಂ ಲೇಟ್ ಸಿದ್ದಪ್ಪ ಹೊಟ್ಟೆಪ್ಪನ ಹಳ್ಳಿ (4) ಹೆಚ್.ಎಸ್. ನಾಗರಾಜ ಬಿನ್ ಹೆಚ್.ಎಸ್. ಸಿದ್ದೇಶ್ ಹೊಟ್ಟೆಪ್ಪನ ಹಳ್ಳಿ(5) ಶಾಂತಮ್ಮ ಕೋಂ ಹೆಚ್.ಎಸ್. ಸಿದ್ದೇಶ್ ಹೊಟ್ಟೆಪ್ಪನ ಹಳ್ಳಿ ಚಳ್ಳಕೆರೆ ತಾಲ್ಲೂಕ್ ಇವರಿಗೆ ಜಪ್ತಿ ನೋಟಿಸು–ನಂಬ್ರು 881/ಎ.ಆರ್.ಸಿ.ಹೆಚ್/297/67–68 ವಿ. ಚಳ್ಳಕೆರೆ ಅರ್ಬನ್ ಕೋ ಅಪರೇಟಿವ್ ಬ್ಯಾಂಕ್ ಲಿ., ಚಳ್ಳಕೆರೆ ಇವರಿಗೆ ನಿಮ್ಮಿಂದ ಬರಬೇಕಾದ ಹಣವನ್ನು ಕೊಡಬೇಕಾಗಿ ಬರಹ ಮೂಲಕ ನಿಮಗೆ ತಿಳಿಸಿದಾಗ್ಯೂ ಸದರಿ ಹಣ ರೂ.89.99.596.00 ಇತರೇ (31.1.2007ಕ್ಕೆ) ರೂ. ಎಂಭತ್ತೊಂಬತ್ತುಲಕ್ಷ ತೊಂಬತ್ತುಸಾವಿರದ ಐದು ನೂರಾತೊಂಬತ್ತಾರು ಮಾತ್ರ)ಗಳನ್ನು ಈವರೆಗೆ ನೀವು ಕೊಡದೆ ಇರುವ ಕಾರಣದಿಂದಲೂ –ವ– ಕೊಡಲಿಕ್ಕೆ ತಪ್ಪಿದ ಕುರಿತು ತಕ್ಕುದಾದ ಕಾರಣಗಳನ್ನು ಕೊಡದೆ ಇದ್ದುದರಿಂದಲೂ ನಿಮ್ಮ ಹಕ್ಕಿನ ಈ ಕೆಳಗೆ ಕಾಣಿಸಿದ ಸ್ಥಿರ ಸ್ವತ್ತುಗಳನ್ನು ಜಪ್ತಿ ಮಾಡಲ್ಪಟ್ಟವೆಂಬುದಾಗಿ ನಿಮಗೆ ಈ ಮೂಲಕ ತಿಳಿಸೋಣವಾಗುತ್ತದೆ. ಮತ್ತು ಬಾಕಿ ಹಣವನ್ನು

ತಾ:26.3.2007ರ ಒಳಗೆ ಬಡ್ಡಿ-ವ-ಇತರೆ ಖರ್ಚು ಸಮೇತ ಪಾವತಿ ಮಾಡದೆ ಇದ್ದರೆ ಕಾನೂನು ಪ್ರಕಾರ ಸದರಿ ಸ್ಥಿರ ಸ್ವತ್ತುಗಳು ಮಾರಾಟ ಮಾಡಲ್ಪಡುವವು.

**ಸಾಲಗಾರರಾದ ಶಾಂತಮ್ಮ ಕೋಂ ಹೆಚ್.ಎಸ್. ಸಿದ್ದೇಶ್ ಹೊಟ್ಟೆಪ್ಪನಹಳ್ಳಿ, ಚಳ್ಳಕೆರೆತಾಲ್ಲೂಕ್ ಇವರ ಹೆಸರಿನಲ್ಲಿರುವ ಸ್ಥಿರ ಸ್ವತ್ತುಗಳ ಯಾದಸ್ಸು**

| | **ಚಕ್ಕುಬಂದಿ** |
|---|---|
| **ಚಳ್ಳಕೆರೆ ಟೌನ್ ಮುನಿಸಿಪಲ್** | **ಪೂರ್ವಕ್ಕೆ** :ಇದೇ ನಂಬರ್ ಪೈಕಿ ತಿಪ್ಪೇಸ್ವಾಮಿಯವರ ಜಮೀನು |
| **ಖಾತೆ ಸಂಖ್ಯೆ** :5123 ರಿಂದ 5162 | |
| **ಅ.ನಂ.** :3760 ರಿಂದ 3799 | |
| **ಪುಟ ಸಂಖ್ಯೆ** : ಪುಸ್ತಕ ಸಂಖ್ಯೆ 1ರಲ್ಲಿ 831 ನಂಬ್ರ ಸಂಪುಟದ 240 ರಿಂದ 242ನೇ ಪುಟಗಳ ಮೇಲೆ 2032 ನೇ ನಂಬರ್ ಆಗಿ ನೋಂದಣಿ ಆಗಿರುತ್ತದೆ | **ಪಶ್ಚಿಮಕ್ಕೆ** :ಪಾರೆಸ್ಟ್ |
| **ಡಿವಿಜನ್** : ಚಳ್ಳಕೆರೆ ಟೌನ್ ಪುರಸಭಾ ವ್ಯಾಪ್ತಿಯಲ್ಲಿ ಭಾಗ 3 ರಲ್ಲಿ ಚಿತ್ರದುರ್ಗ ರಸ್ತೆಯಲ್ಲಿ ಬರುವ ರಿ.ಸ.ನಂ. 308 ರಲ್ಲಿ ವಾಸಕ್ಕಾಗಿ ಪರಿವರ್ತನೆ ಗೊಂಡಿರುವ 2 ಎಕರೆ ಜಮೀನಿನಲ್ಲಿ ವಿಂಗಡಿಸಿರುವ 40 ಸೈಟುಗಳು | **ಉತ್ತರಕ್ಕೆ** :ಕುದುರೆ ದುರುಗಯ್ಯನವರ ಜಮೀನು |
| **ಸ್ಥಿರಾಸ್ತಿಗಳ ವಿವರ** : -----ಡಿಟೋ--------- | **ದಕ್ಷಿಣಕ್ಕೆ** :ಎ.ಕೆ. ತಿಪ್ಪೇಸ್ವಾಮಿಯವರ ಜಮೀನು |
| **ಅಳತೆ** : 9x12 ಮೀಟರ್ ಖಾಲಿ ಜಾಗ | |

ಮಾರಾಟಾಧಿಕಾರಿ (ಪ್ರಭಾರ)
ಪಿ.ಆರ್. 332 ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ ಚಿತ್ರದುರ್ಗ

## ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ-ನಿಬಂಧಕರ ಶಿವಮೊಗ್ಗ, ರವರ ಕಾರ್ಯಾಲಯ

**ವಿಷಯ:** ಸಮಾಪನಾ ಅದೇಶಿತ ಶಿಗ್ಗಾ ಹಾಲು ಉತ್ಪಾದಕರ ಸಹಕಾರ ಸಂಘ ನಿ: ಶಿಗ್ಗಾ, ಸೊರಬ ತಾಲ್ಲೂಕು, ಇದರ ನೊಂದಣಿ ರದ್ದತಿ ಬಗ್ಗೆ.

**ಉಲ್ಲೇಖ:** 1. ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ, ರವರ ಆದೇಶ ನಂ. ಡಿಆರ್‌ಎಸ್: ಸಮಾಪನೆ:ಡಿಎಲ್‌ಎಸ್: 38:2005-06: ದಿನಾಂಕ:15.6.2006.

2 ನಂ. ಸನಿ-25:ಎಲ್‌ಕ್ಯೂಡಿ: 181:2006-07: ದಿನಾಂಕ:28.2.2007.

**ಪ್ರಸ್ತಾವನೆ:**

ಹಾಲು ಉತ್ಪಾದಕರ ಸಹಕಾರ ಸಂಘ ನಿ:ಶಿಗ್ಗಾ, ಸೊರಬ ತಾಲ್ಲೂಕು, ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ-ವಿಭಾಗ, ಸಾಗರ, ಇವರ ಕಾರ್ಯಾಲಯದಲ್ಲಿ ನೋಂದಣಿಯಾಗಿದ್ದು, ನೊಂದಣಿ ಸಂ:29544: 2000-01, ದಿನಾಂಕ:24.3.2001 ಆಗಿರುತ್ತದೆ. ಇದರ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ವ್ಯಾಪ್ತಿಯುಳ್ಳದ್ದಾಗಿದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ ಹಿನ್ನಲೆಯಲ್ಲಿ ಉಲ್ಲೇಖ(1)ರ ಆದೇಶದಲ್ಲಿ ಸಮಾಪನೆಗೊಳಿಸಿದ್ದು, ಮಾರ್ಗಾಧಿಕಾರಿ, ಶಿವಮೊಗ್ಗ, ಶಿವಮೊಗ್ಗ ಹಾಲು ಒಕ್ಕೂಟ, ಸೊರಬ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ.ಸದರಿಯವರು ದಿನಾಂಕ:29.8.2006 ರಂದು ಅಧಿಕಾರ ವಹಿಸಿಕೊಂಡು ಚಾರ್ಜ್ ಪಡೆದು ಚರಾಸ್ತಿ ವಿಲೇವಾರಿ ಮಾಡಿ ಲೆಕ್ಕಪತ್ರಗಳನ್ನು ದಿನಾಂಕ: 31.3.2003 ರವರೆಗೆ ಆಡಿಟ್ ಮಾಡಿಸಿರುತ್ತಾರೆ.ತದನಂತರದ ಅವಧಿಗೆ ಅಂದರೆ ದಿನಾಂಕ:1.4.2004 ರಿಂದ 28.2.2007 ರವರೆಗೆ ಜಮಾ-ಖರ್ಚು ತಯಾರಿಸಿ ಆಸ್ತಿ-ಜವಾಬ್ದಾರಿ ಶೂನ್ಯಗೊಳಿಸಿರುತ್ತಾರೆ. ಸಮಾಪನಾಧಿಕಾರಿಯವರು ದಿನಾಂಕ:28.2.2007 ರಂದು ಅಂತಿಮ ಸಭೆ ನಡೆಸಿ, ಈ ಸಂಘದಲ್ಲಿ ಜವಾಬ್ದಾರಿ ತೀರುವಳಿ ಆದ ನಂತರ ಈ ಸಂಘದ ನೊಂದಣಿಯನ್ನು ರದ್ದುಪಡಿಸಿ ಸಭೆಯಲ್ಲಿ ನಿರ್ಣಯಿಸಿ ನಡವಳಿಕೆ ಸಲ್ಲಿಸಿರುತ್ತಾರೆ. ಉಲ್ಲೇಖ(2)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ, ಇವರು ಪ್ರಸ್ತಾವನೆ ಪರಿಶೀಲಿಸಿ ನೋಂದಣಿ ರದ್ದತಿಗೆ ಶಿಫಾರಸ್ಸು ಮಾಡಿರುತ್ತಾರೆ. ಸಮಾಪನಾಧಿಕಾರಿಯವರ ನಿರ್ಣಯ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ-ವಿಭಾಗ, ಸಾಗರ, ಇವರ ಶಿಫಾರಸ್ಸು ಆಧಾರಿತವಾಗಿ ನೊಂದಣಿ ರದ್ದತಿಗೆ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ಕ್ರ:ಸಂ:ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್:38:2005-06 2760 ದಿನಾಂಕ: 28ನೇ ಫೆಬ್ರವರಿ 2007**

ಕರ್ನಾಟಕ ಸಹಕಾರ ಸಂಘಗಳ 1959ರ ಕಲಂ 75ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001:ದಿನಾಂಕ:21.11.2001ರಲ್ಲಿ ದತ್ತವಾಗಿರುವ ಅಧಿಕಾರ ಚಲಾಯಿಸಿ, ಕೆ. ಈಶ್ವರಸ್ವಾಮಿ,

ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ಆದ ನಾನು ಸಮಾಪನಾದೇಶಿತ ಎಂ.ಪಿ.ಸಿ.ಎಸ್. ಶಿಗ್ಗಾ, ಸೊರಬ ತಾಲ್ಲೂಕು, ಇದರ ನೋಂದಣಿ ಸಂ. 29544:2000–01:ದಿನಾಂಕ:24.3.2001 ಇದನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು ಮೂರು ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ, ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ 28ನೇ ಫೆಬ್ರವರಿ 2007 ರಂದು ನನ್ನ ಸ್ವಸಹಿ ಮತ್ತು ಕಚೇರಿ ಮುದ್ರೆಯೊಂದಿಗೆ ಹೊರಡಿಸಿದೆ.

**ಕೆ. ಈಶ್ವರಸ್ವಾಮಿ**
ಸಹಕಾರ ಸಂಘಗಳ ಉಪ–ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 333

## ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ–ನಿಬಂಧಕರ ಶಿವಮೊಗ್ಗ, ರವರ ಕಾರ್ಯಾಲಯ

**ವಿಷಯ:** ಸಮಾಪನಾ ಅದೇಶಿತ ಕುಪ್ಪೆ ಹಾಲು ಉತ್ಪಾದಕರ ಸಹಕಾರ ಸಂಘ ಸೊರಬ ತಾಲ್ಲೂಕು, ಇದರ ನೊಂದಣಿ ರದ್ದತಿ ಬಗ್ಗೆ.

**ಉಲ್ಲೇಖ:** 1. ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ, ಇವರ ಆದೇಶ ನಂ.ಡಿಆರ್‌ಎಸ್: ಸಮಾಪನೆ:ಡಿಎಲ್‌ಎಸ್: 1936:2003–04: ದಿನಾಂಕ:13.2.2004.

2 ಸಹಕಾರ ಸಂಘಗಳ ಸಹಾಯಕನಿಬಂಧಕರು, ಸಾಗರ ಉಪವಿಭಾಗ, ಸಾಗರ, ಇವರ ಪತ್ರ ಸಂ.ಸನಿ–25 ಎಲ್‌ಕ್ಯೂಡಿ:180:2006–07:ದಿನಾಂಕ:28.2.07.

**ಪ್ರಸ್ತಾವನೆ:**

ಕುಪ್ಪೆ ಹಾಲು ಉತ್ಪಾದಕರ ಸಹಕಾರ ಸಂಘ ನಿ,: ಸೊರಬ ತಾಲ್ಲೂಕು, ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ–ವಿಭಾಗ, ಸಾಗರ, ಇವರ ಕಾರ್ಯಾಲಯದಲ್ಲಿ ಸಂ:ಸಸಂಸನಿ–25:ನೊಂದಣಿ:ಸಿಆರ್–116:25433:99–2000:ದಿನಾಂಕ:8.9.1999 ರಲ್ಲಿ ನೋಂದಣಿಯಾಗಿದ್ದು, ಇದರ ಕಾರ್ಯವ್ಯಾಪ್ತಿಯು ಕುಪ್ಪೆ ಗ್ರಾಮಕ್ಕೆ ಮಾತ್ರ ಸೀಮಿತವಾಗಿ, ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಕಾರ್ಯ ವ್ಯಾಪ್ತಿಯುಳ್ಳದ್ದಾಗಿದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ ಹಿನ್ನಲೆಯಲ್ಲಿ ಉಲ್ಲೇಖ(1)ರ ಆದೇಶದಲ್ಲಿ ಸಮಾಪನೆಗೊಳಿಸಿದ್ದು, ಮಾರ್ಗಾಧಿಕಾರಿ, ಶಿವಮೊಗ್ಗ, ಹಾಲು ಉತ್ಪಾದಕರ ಸಹಕಾರ ಸಂಘಗಳ ಒಕ್ಕೂಟ, ನಿಯಮಿತ, ಸೊರಬ ತಾಲ್ಲೂಕು, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ಸದರಿ ಸಮಾಪನಾಧಿಕಾರಿಯವರು ದಿನಾಂಕ:23.12.2004 ರಂದು ಅಧಿಕಾರ ವಹಿಸಿಕೊಂಡು ಚಾರ್ಜ್ ಪಡೆದು ಆದ್ಯತಾಪಟ್ಟಿಯ ಅನುಮೋದನೆ ಪಡೆದು ಚರಾಸ್ತಿಯನ್ನು ವಿಲೇವಾರಿ ಮಾಡಿ ಲೆಕ್ಕಪತ್ರಗಳನ್ನು ದಿನಾಂಕ: 31.3.2003 ರವರೆಗೆ ಆಗಿದ್ದು, ತದನಂತರ ದಿನಾಂಕ:1.4.2000ರಿಂದ 31.3.2006 ರವರೆಗೆ ಜಮಾ–ಖರ್ಚು ತಯಾರಿಸಿ, ಆಸ್ತಿ–ಜವಾಬ್ದಾರಿ ಶೂನ್ಯಗೊಳಿಸಿರುತ್ತಾರೆ. ಸಮಾಪನಾಧಿಕಾರಿಯವರು ದಿನಾಂಕ:28.2.2007 ರಂದು ಅಂತಿಮ ಸಭೆ ನಡೆಸಿ, ಈ ಸಂಘದಲ್ಲಿ ಆಸ್ತಿ–ಜವಾಬ್ದಾರಿ ತೀರುವಳಿ ಆದ ನಂತರ ಈ ಸಂಘದ ನೊಂದಣಿಯನ್ನು ರದ್ದುಪಡಿಸಿ ಸಭೆಯಲ್ಲಿ ನಿರ್ಣಯಿಸಿ ನಡವಳಿಕೆ ಸಲ್ಲಿಸಿರುತ್ತಾರೆ. ಉಲ್ಲೇಖ(2)ರ ಸಹಾಯಕ ನಿಬಂಧಕರು, ಸಾಗರ,ಉಪ–ವಿಭಾಗ, ಸಾಗರ, ಇವರು ಪ್ರಸ್ತಾವನೆಯನ್ನು ಪರಿಶೀಲಿಸಿ ನೋಂದಣಿ ರದ್ದತಿಗೆ ಶಿಫಾರಸ್ಸು ಮಾಡಿರುತ್ತಾರೆ. ಸಮಾಪನಾಧಿಕಾರಿಯವರ ನಿರ್ಣಯ, ಸಹಕಾರ ಸಂಘಗಳ ಸಹಾಯಕ ಶಿಫಾರಸ್ಸು ಆಧಾರಿತವಾಗಿ ನೊಂದಣಿ ರದ್ದತಿಗೆ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ಕ್ರ:ಸಂ:ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್:1936:2003–04 2761 ದಿನಾಂಕ:28ನೇ ಫೆಬ್ರವರಿ 2007**

ಕರ್ನಾಟಕ ಸಹಕಾರ ಸಂಘಗಳ 1959ರ ಕಲಂ 75ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂ:ಸಿಎಂಡಬ್ಲ್ಯೂ:69:ಸಿಎಲ್‌ಎಂ:200:ದಿನಾಂಕ:21.11.2001ರಲ್ಲಿ ದತ್ತವಾಗಿರುವ ಅಧಿಕಾರ ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ಆದ ನಾನು ಸಮಾಪನಾದೇಶಿತ ಕುಪ್ಪೆ ಹಾಲು ಉತ್ಪಾದಕರ ಸಹಕಾರ ಸಂಘ ನಿ:: ಸೊರಬ ತಾಲ್ಲೂಕು, ಇದರ ನೋಂದಣಿ ಸಂ. ಸಸಂಸನಿ–25:ನೊಂದಣಿ:ಸಿಆರ್–116:25433:99–2000:ದಿನಾಂಕ:8.9.1999 ಇದನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು ಮೂರು ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ–ವಿಭಾಗ, ಸಾಗರ, ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ 28ನೇ ಫೆಬ್ರವರಿ 2007 ರಂದು ನನ್ನ ಸ್ವಸಹಿ ಮತ್ತು ಕಚೇರಿ ಮುದ್ರೆಯೊಂದಿಗೆ ಹೊರಡಿಸಿದೆ.

**ಕೆ. ಈಶ್ವರಸ್ವಾಮಿ**
ಸಹಕಾರ ಸಂಘಗಳ ಉಪ–ನಿಬಂಧಕರ

ಪಿ.ಆರ್. 334

ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ-ನಿಬಂಧಕರ ಶಿವಮೊಗ್ಗ, ರವರ ಕಾರ್ಯಾಲಯ

**ವಿಷಯ:** ಸಮಾಪನಾ ಅದೇಶಿತ ಚಂದ್ರಗುತ್ತಿ ಹಾಲು ಉತ್ಪಾದಕರ ಸಹಕಾರ ಸಂಘನಿ: ಸೊರಬ ತಾಲ್ಲೂಕು, ಇದರ ನೊಂದಣಿ ರದ್ದತಿ ಬಗ್ಗೆ.

**ಉಲ್ಲೇಖ:** 1. ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ,ರವರ ಆದೇಶ ನಂ.ಡಿಆರ್ಎಸ್: :ಕಾನೂನು-3:ಡಿಎಲ್ಎಸ್: 26:2001-02: ದಿನಾಂಕ:29.9.2001.

2 ಸಹಕಾರ ಸಂಘಗಳ ಸಹಾಯಕನಿಬಂಧಕರು, ಸಾಗರ ಉಪ-ವಿಭಾಗ, ಸಾಗರ, ಇವರ ಪತ್ರ ಸಂ.ಎಆರ್-25:ಸಮಾಪನೆ:ಸಿಆರ್-171:06-07:ದಿನಾಂಕ :28.2.07.

**ಪ್ರಸ್ತಾವನೆ:**

ಚಂದ್ರಗುತ್ತಿ ಹಾಲು ಉತ್ಪಾದಕರ ಸಹಕಾರ ಸಂಘ ನಿ,: ಸೊರಬ ತಾಲ್ಲೂಕು, ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಇವರ ಕಾರ್ಯಾಲಯದಲ್ಲಿ ಸಂ:18518:90-91:ದಿನಾಂಕ:31.1.1991ರಲ್ಲಿ ನೋಂದಣಿಯಾಗಿದ್ದು, ಇದರ ಕಾರ್ಯವ್ಯಾಪ್ತಿಯು ತಾಲ್ಲೂಕಿಗಿಂತ ಕಡಿಮೆ ವ್ಯಾಪ್ತಿಯುಳ್ಳದ್ದಾಗಿದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ ಹಿನ್ನಲೆಯಲ್ಲಿ ಉಲ್ಲೇಖ(1)ರ ಆದೇಶದಲ್ಲಿ ಸಮಾಪನೆಗೊಳಿಸಿ, ಮಾರ್ಗಾಧಿಕಾರಿ, ಶಿಮೂಲ್, ಸೊರಬ, ತಾಲ್ಲೂಕು, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕಗೊಳಿಸಲಾಗಿದೆ. ಸದರಿ ಸಮಾಪನಾಧಿಕಾರಿಯವರು ದಿನಾಂಕ:26.11.2001 ರಂದು ಅಧಿಕಾರ ವಹಿಸಿಕೊಂಡು ಚಾರ್ಜ್ ಪಡೆದು ಕಾರ್ಯನಿರ್ವಹಿಸಿರುತ್ತಾರೆ. ಸಂಘದ ಲೆಕ್ಕಪರಿಶೋಧನೆಯು ದಿನಾಂಕ:31.3.1996 ರವರಗೆ ಆಗಿದ್ದು ತದನಂತರ ಅವಧಿಗೆ ಸಮಾಪನಾಧಿಕಾರಿಯವರು ಜಮಾ-ಖರ್ಚು ಲಾಭ-ನಷ್ಟದ ತಃಖ್ತೆ ತಯಾರಿಸಿ, ಆಸ್ತಿ-ಜವಾಬ್ದಾರಿ ಶೂನ್ಯಗೊಳಿಸಿರುತ್ತಾರೆ. ಸಮಾಪನಾಧಿಕಾರಿಯವರು ದಿನಾಂಕ:28.2.2007 ರಂದು ಅಂತಿಮ ಸಭೆ ನಡೆಸಿ, ಈ ಸಂಘದ ಜವಾಬ್ದಾರಿ ತೀರುವಳಿ ಆದ ನಂತರ ನೊಂದಣಿಯನ್ನು ರದ್ದುಪಡಿಸಲು ಸಭೆಯಲ್ಲಿ ನಿರ್ಣಯಿಸಿ ನಡವಳಿಕೆ ಸಲ್ಲಿಸಿರುತ್ತಾರೆ. ಉಲ್ಲೇಖ(2)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ, ಇವರು ಪ್ರಸ್ತಾವನೆಯನ್ನು ಪರಿಶೀಲಿಸಿ ನೋಂದಣಿ ರದ್ದತಿಗೆ ಶಿಫಾರಸ್ಸು ಮಾಡಿರುತ್ತಾರೆ. ಸಮಾಪನಾಧಿಕಾರಿಯವರ ನಿರ್ಣಯ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಶಿಫಾರಸ್ಸು ಆಧಾರಿತವಾಗಿ ನೊಂದಣಿ ರದ್ದತಿಗೆ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ಕ್ರ:ಸಂ:ಡಿಆರ್ಎಸ್:ಸಮಾಪನೆ:202:06-07 2762 ದಿನಾಂಕ:28ನೇ ಫೆಬ್ರವರಿ 2007**

ಕರ್ನಾಟಕ ಸಹಕಾರ ಸಂಘಗಳ 1959ರ ಕಲಂ 75ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂ:ಸಿಎಂಡಬ್ಲ್ಯೂ:69:ಸಿಎಲ್ಎಂ:2001:ದಿನಾಂಕ:21.11.2001ರಲ್ಲಿ ದತ್ತವಾಗಿರುವ ಅಧಿಕಾರ ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ಆದ ನಾನು ಸಮಾಪನಾದೇಶಿತ ಚಂದ್ರಗುತ್ತಿ ಹಾಲು ಉತ್ಪಾದಕರ ಸಂಘ ನಿ:: ಸೊರಬ ತಾಲ್ಲೂಕು, ಇದರ ನೊಂದಣಿ ಸಂ.18518:90-91 :ದಿನಾಂಕ:31.1.1991 ಇದನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು ಮೂರು ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ, ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ 28ನೇ ಫೆಬ್ರವರಿ 2007 ರಂದು ನನ್ನ ಸ್ವಸಹಿ ಮತ್ತು ಕಚೇರಿ ಮುದ್ರೆಯೊಂದಿಗೆ ಹೊರಡಿಸಿದೆ.

**ಕೆ. ಈಶ್ವರಸ್ವಾಮಿ**

ಪಿ.ಆರ್. 335

ಸಹಕಾರ ಸಂಘಗಳ ಉಪ-ನಿಬಂಧಕರ
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ನಿರ್ದೇಶಕರು, ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ, ಬೆಂಗಳೂರು ಇವರ ನಡವಳಿಗಳು

**ವಿಷಯ:** ಶ್ರೀ ಎನ್.ಎನ್. ಉದ್ದಪ್ಪನವರ್, ಹಿರಿಯ ವಾಹನ ಚಾಲಕರು, ಧಾರವಾಡ ಇವರಿಗೆ ಅಶಕ್ತತಾ ನಿವೃತ್ತಿ ನೀಡುವ ಕುರಿತು.

**ಓದಲಾಗಿದೆ:** 1. ಶ್ರೀ ಎನ್.ಎನ್. ಉದ್ದಪ್ಪನವರ್, ಹಿರಿಯ ವಾಹನ ಚಾಲಕರು, ಧಾರವಾಡ ಇವರ ಮನವಿ ದಿನಾಂಕ: 11.6.1998.

2 ಹುಬ್ಬಳ್ಳಿಯ ವೈದ್ಯಕೀಯ ಮಂಡಳಿಯು ನೀಡಿರುವ ವೈದ್ಯಕೀಯ ಪ್ರಮಾಣ ಪತ್ರ ಸಂಖ್ಯೆ KIMSH/MB/57/2002-03 ದಿನಾಂಕ 20.11.2002, ಛೇರ್ಮನ್, ಅಧೀಕ್ಷಕರು, ವೈದ್ಯಕೀಯ ಮಂಡಳಿ, ಕಿಮ್ಸ್ ಆಸ್ಪತ್ರೆ, ಹುಬ್ಬಳ್ಳಿ ಇವರ ರಕ್ಷ ಪತ್ರ ಸಂಖ್ಯೆ ಕಿಮ್ಸ್ ಆ:ಎಂ:ಬಿ:57: 2003-04 ದಿನಾಂಕ:21.10.2003.

3 ಸರ್ಕಾರದ ಪತ್ರ ಸಂಖ್ಯೆ ಆಇ 65 ಸಉಲಾ 2006 ದಿನಾಂಕ:8.6.2006.

4 ಸರ್ಕಾರದ ಪತ್ರ ಸಂಖ್ಯೆ: ಆಇ 143 ಸಉಲಾ 2006 ದಿನಾಂಕ:17.2.2007.

**ಪ್ರಸ್ತಾವನೆ:**

ಶ್ರೀ ಎನ್.ಎನ್. ಉದ್ದಪ್ಪನವರ್, ಹಿರಿಯ ವಾಹನ ಚಾಲಕರು, ಧಾರವಾಡ ಇವರು ಓದಲಾದ 1 ರ ಪತ್ರದಲ್ಲಿ ಅವರು ಪಾರ್ಶ್ವ ವಾಯು ಪೀಡಿತರಾಗಿದ್ದು ವಾಹನ ಚಾಲಕರಾಗಿ ಕರ್ತವ್ಯ ನಿರ್ವಹಿಸಲು ಆಶಕ್ತರಾಗಿರುವುದರಿಂದ ಅವರಿಗೆ ಆಶಕ್ತತಾ ನಿವೃತ್ತಿ ವೇತನ ಮಂಜೂರು ಮಾಡುವಂತೆ ಮನವಿ ಸಲ್ಲಿಸಿದ್ದರು.ಅವರ ಮನವಿಯ ಮೇರೆಗೆ ವೈದ್ಯಕೀಯ ಮಂಡಳಿಯಿಂದ ಅಂಗವೈಕಲ್ಯದಿಂದಾದ ಅಶಕ್ತತೆಯ ಬಗ್ಗೆ ದೃಢೀಕರಣ ಪತ್ರ ಪಡೆಯುವಂತೆ ತಿಳಿಸಲಾಗಿತ್ತು. ಓದಲಾದ 2 ರ

ಪತ್ರದಲ್ಲಿ ಹುಬ್ಬಳ್ಳಿಯ ವೈದ್ಯಕೀಯ ಮಂಡಳಿಯು ಶ್ರೀ ಎನ್.ಎನ್. ಉದ್ದಪ್ಪನವರ್ ರವರು ಶಾಶ್ವತ ಅಂಗವೈಕಲ್ಯ ಹೊಂದಿರುತ್ತಾರೆ (Permanetly disabled) ಎಂದು ದೃಢಿಕರಿಸಿರುತ್ತದೆ. ಓದಲಾದ 3 ರ ಪತ್ರದಲ್ಲಿ ಸರ್ಕಾರವು ತಿಳಿಸಿರುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 260 ರಡಿ ಪರಿಶಿಲಿಸಲಾಗಿ 'ಸಿ' ಗುಂಪಿಗೆ ಸೇರಿದ ಸದರಿ ನೌಕರರು ತಾಂತ್ರಿಕ ಹುದ್ದೆಗೆ ಸೇರಿದ ಕಾರಣ ಇದೇ ಗುಂಪಿನ ಇತರೆ ಹುದ್ದೆಗೆ ಬೇಕಾದ ಕನಿಷ್ಠ ವಿದ್ಯಾರ್ಹತೆ ಹೊಂದಿಲ್ಲದಿರುವುದರಿಂದ ವೃಂದ ಬದಲಾವಣೆ ಮಾಡಲು ಅವಕಾಶವಿರುವುದಿಲ್ಲ ರೂ. 2500–3850 ವೇತನ ಶ್ರೇಣಿಯ 'ಡಿ' ಗುಂಪಿನ ದಲಾಯತ್ ಹುದ್ದೆಗೆ ಇವರನ್ನು ವೃಂದ ಬದಲಾವಣೆ ಮಾಡಿದಲ್ಲಿ, ಗರಿಷ್ಠ ವೇತನ ನಿಗದಿ ಪಡಿಸಿದರೂ ಅವರು ಪ್ರಸ್ತುತ ಪಡೆಯುತ್ತಿರುವ ವೇತನಕ್ಕಿಂತಲೂ ಕಡಿಮೆ ವೇತನ ನಿಗದಿಯಾಗುತ್ತದೆ ಆದ್ದರಿಂದ ಮತ್ತು ಮಹಾಲೇಖಾಪಾಲರು ಹಿರಿಯ ವಾಹನ ಚಾಲಕರು ಕಾರ್ಯ ನಿರ್ವಹಿಸದೇ ಇದ್ದರೂ ಅವರಿಗೆ ಆ ಹುದ್ದೆಯ ವೇತನ ನೀಡುತ್ತಿರುವ ಬಗ್ಗೆ ಆಡಿಟ್ ನಲ್ಲಿ ಆಕ್ಷೇಪಣೆ ಮಾಡಿರುವ ಕಾರಣ ರಿ ಎನ್.ಎನ್. ಉದ್ದಪ್ಪನವರನ್ನು ಅಶಕ್ತತೆಯ ಮೇರೆಗೆ ನಿವೃತ್ತಿಗೊಳಸುವ ಬಗ್ಗೆ ಸರ್ಕಾರದಿಂದ ಆದೇಶ ಕೋರಲಾಗಿ ಓದಲಾದ 4 ರ ಪತ್ರದಲ್ಲಿ ಈ ನೌಕರರು ಗ್ರೂಪ್ ಸಿ. ವೃಂದಕ್ಕೆ ಸೇರಿರುವುದರಿಂದ ಇಲಾಖಾ ಮುಖ್ಯಸ್ಥರೇ ಪರಿಶೀಲಿಸಿ ಸೂಕ್ತ ನಿರ್ಧಾರ ತೆಗೆದುಕೊಳ್ಳುವಂತೆ ತಿಳಿಸಲಾಗಿದೆ. ಅದರಂತೆ ಹಾಗೂ ಶ್ರಿ ಎನ್.ಎನ್. ಉದ್ದಪ್ಪನವರನ್ನು ವೃಂದ 'ಸಿ' ಯ ಬೇರೆ ಯಾವುದೇ ಹುದ್ದೆಗೆ ಬದಲಾಯಿಸಲು ಅವಕಾಶವಿಲ್ಲದಿರುವ ಕಾರಣ, ವೈದ್ಯಕೀಯ ಮಂಡಳಿಯು ಶ್ರೀ ಎನ್.ಎನ್. ಉದದಪ್ಪನವರ್ ರವರು ಶಾಶ್ವತ ಅಂಗ ವೈಕಲ್ಯ ಹೊಂದಿರುತ್ತಾರೆ (Permanetly disabled) ಎಂದು ದೃಢೀಕರಿಸಿರುವುದರಿಂದ ಅವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 273 (ii) ರಡಿ ಅಶಕ್ತತೆಯ ಮೇರೆಗೆ ನಿವೃತ್ತಿಗೊಳಿಸಲು ಉದ್ದೇಶಿಸಿ ಕೆಳಕಾಣಿಸಿದ ಆದೇಶ ಹೊರಡಿಸಿದೆ.

**ಆದೇಶ**

**ಸಉಸಿ (2) 90/1997–98 ದಿನಾಂಕ:3ನೇ ಮಾರ್ಚ್.2007**

ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸುಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖಾ ಮುಖ್ಯಸ್ಥನಾದ ಹಾಗು ಸಿ ವೃಂದದ ನೇಮಕಾತಿ ಪ್ರಾಧಿಕಾರಿಯಾದ ಶ್ರೀ ಹೆಚ್. ಚಿತ್ತರಂಜನ್ ಆದ ನಾನು ಶ್ರಿ ಎನ್.ಎನ್. ಉದ್ದಪ್ಪನವರ್, ಹಿರಿಯ ವಾಹನ ಚಾಲಕರು, ಧಾರವಾಡ ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 273 (ii) ರಡಿ ಶಾಶ್ವತ ಅಂಗ ವೈಕಲ್ಯ ಹೊಂದಿದ ಅಶಕ್ತತೆಯ ಮೇರೆಗೆ ದಿನಾಂಕ 31.3.2007 ರಿಂದ ಜಾರಿಗೆ ಬರುವಂತೆ ನಿವೃತ್ತಿಗೊಳಿಸಿರುತ್ತೇನೆ.

ನಿರ್ದೇಶಕರು,
ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ,
ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ, ಬೆಂಗಳೂರು

ಪಿ.ಆರ್. 336

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ದ.ಕ. ಉಪ ವಿಭಾಗ–I**
**ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು–ಇವರ ನ್ಯಾಯಾಲಯ**
**ಸಂಖ್ಯೆ: ಡಬ್ಲ್ಯೂಸಿಎ /ಸಿಆರ್ –30/2007 F ದಿನಾಂಕ : 5ನೇ ಮಾರ್ಚ್ 2007**

| **ಅರ್ಜಿದಾರರು:** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| 1. ಲೂಯಿಸ್ ಮೊರಾಸ್, ಪ್ರಾ 54 ವರ್ಷ ತಂದೆ :ಮಾರ್ಟಿನ್ ಮೊರಾಸ್,<br>2. ಶ್ರೀಮತಿ ಕರ್ಮಿನ್ ಸಿಲ್ವಾ, ಪ್ರಾಯ 48 ವರ್ಷ, ಗಂಡ ಲೂಯಿಸ್ ಮೊರಾಸ್,<br>3. ಪ್ರಾನ್ಸಿಸ್ ಮೊರಾಸ್, ಪ್ರಾಯ 27 ವರ್ಷ ತಂದೆ: ಲೂಯಿಸ್ ಮೊರಾಸ್,<br>ವಾಸ: ಮುರಮನೆ, ನಾವೂರು ಗ್ರಾಮ, ಬೆಳ್ತಂಗಡಿ ತಾಲೂಕು. | V/s | 1. ಕಾರ್ಯದರ್ಶಿ, ಕಪುಟೆನ್ ಕೃಷಿ ಸೇವಾ ಕೇಂದ್ರ ಮಿಮುಕ್ತಿ, ಲ್ಯಾಲ,ವಿಜಿರೆಗ್ರಾಮ, ಬೆಳ್ತಂಗಡಿ ತಾಲೂಕು..<br>2. ಮ್ಯಾನೇಜರ್, ಓರಿಯಂಟಲ್ ಇನ್ಶುರೆನ್ಸ್ ಕಂ.ಲಿ ಬ್ರಾಂಚ ಆಫೀಸ್ ಸಿಟಿ ಪಾಯಿಂಟ್ ಬಿಲ್ಡಿಂಗ್, ಪ್ರೆಸ್ ಕ್ಲಬ್ M.G. Road ಕಾಸರಗೋಡು. |

**ಅಧಿಸೂಚನೆ**

ಅರ್ಜಿದಾರನಾದ /ಅರ್ಜಿದಾರಳಾದ ಶ್ರೀಮತಿ /ಶ್ರೀ ಲೂಯಿಸ್ ಮೊರಾಸ್, ಇವರು ತಮ್ಮ ಮಗನಾದ /ಶ್ರೀ ದಿವಗಂತ ಗ್ರೆಗೋರಿ ಮೊರಾಸ್ ಇವರು 1ನೇ ಪ್ರತಿವಾದಿಗಳಾದ ಕಾರ್ಯದರ್ಶಿ, ಕಪುಟೆನ್ ಕೃಷಿ ಸೇವ ಕೇಂದ್ರ ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:13.12.2006 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು. ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ /ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಎಸ್.ಸಿ. ರಾಮಚಂದ್ರ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ

ಪಿ.ಆರ್. 337

ಆಯುಕ್ತರು, ದ.ಕ. ಉಪ ವಿಭಾಗ-1, ಮಂಗಳೂರು

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ದ.ಕ. ಉಪ ವಿಭಾಗ-I**
**ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು-ಇವರ ನ್ಯಾಯಾಲಯ**
**ಸಂಖ್ಯೆ: ಡಬ್ಲ್ಯೂಸಿಎ /ಸಿಆರ್-31 /2007 F ದಿನಾಂಕ : 5ನೇ ಮಾರ್ಚ್ 2007**

**ಅರ್ಜಿದಾರರು:**
1. ಪದ್ಮ ಮೂಲ್ಯ,, ಪ್ರಾಯ 48 ವರ್ಷ
ತಂದೆ :ಕೊರಗು ಮೂಲ್ಯ,
2. ಶ್ರೀಮತಿ ಗಿರಿಜ, ಪ್ರಾಯ 44 ವರ್ಷ,
ಗಂಡ ಪದ್ಮ ಮೂಲ್ಯ,
3. ಕುಮಾರಿ ವಸಂತಿ, ಪ್ರಾಯ 24 ವರ್ಷ
ತಂದೆ: ಪದ್ಮ ಮೂಲ್ಯ,
4. ಕುಮಾರಿ ಮಮತಾ, ಪ್ರಾಯ 19 ವರ್ಷ
ತಂದೆ ಪದ್ಮ ಮೂಲ್ಯ,
ವಾಸ: ಕಡ್ತಿಯಾರ ಮನೆ, ಸೋಣಂದೂರು ಗ್ರಾಮ,
ಬೆಳ್ತಂಗಡಿ ತಾಲೂಕು.

**ವಿರುದ್ಧ**
V/s

**ಪ್ರತಿವಾದಿಗಳು:**
1. ಕೆ. ಗಣಪತಿ ಕಾಮತ್, ತಂದೆ. ಕೇಶವಕಾಮತ್, ಗಣೇಶ ಟ್ರಾವೆಲ್ಸ್, ಹಳೆ ಬಸ್ ನಿಲ್ದಾಣ, ಹಂಪನಕಟ್ಟಾ, ಮಂಗಳೂರು.
2. ಮ್ಯಾನೇಜರ್, ಓರಿಯಂಟಲ್ ಇನ್ಶುರೆನ್ಸ್ ಕಂ.ಲಿ ಬ್ರಾಂಚ ಆಫೀಸ್ ಸಿಟಿ ಪಾಯಿಂಟ್ ಬಿಲ್ಡಿಂಗ್, ಪ್ರೆಸ್ ಕ್ಲಬ್ M.G. Road ಕಾಸರಗೋಡು.

**ಅಧಿಸೂಚನೆ**

ಅರ್ಜಿದಾರನಾದ /ಅರ್ಜಿದಾರಳಾದ ಶ್ರೀಮತಿ /ಶ್ರೀ ಪದ್ಮ ಮೂಲ್ಯ ಮತ್ತು ಇತರರು, ಇವರು ತಮ್ಮ ಮಗನಾದ/ ಗಂಡನಾದ ಶ್ರೀ ಲೋಕೇಶ್ ಇವರು 1ನೇ ಪ್ರತಿವಾದಿಗಳಾದ ಶ್ರೀ ಕೆ. ಗಣಪತಿ ಕಾಮತ್ ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:17.12.2006 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು. ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ /ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಎಸ್.ಸಿ. ರಾಮಚಂದ್ರ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ದ.ಕ. ಉಪ ವಿಭಾಗ-1, ಮಂಗಳೂರು

ಪಿ.ಆರ್. 338

## ನಗರಾಭಿವೃದ್ಧಿ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ನಅಇ 529 ಮೈಅಪ್ರಾ 2005, ಬೆಂಗಳೂರು, ದಿನಾಂಕ: 7ನೇ ಮಾರ್ಚ್ 2007**

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಕಲಂ 19(7) ಮತ್ತು ಕರ್ನಾಟಕ ಭೂ ಸ್ವಾಧೀನ ಕಾಯ್ದೆ, 1894 ರ ಕಲಂ 48(1) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ, 1987 ರ ಅಧಿನಿಯಮ 19(1) ರನ್ವಯ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರವು ಹಿನಕಲ್ ವಿಜಯನಗರ ವಸತಿ ಬಡಾವಣೆ ರಚಿಸುವ ಸಲುವಾಗಿ ಈ ಕೆಳಕಂಡ ಅನುಸೂಚಿಯಡಿಯಲ್ಲಿ ವಿವರಿಸಿರುವ ವಿಸ್ತೀರ್ಣದ ಜಮೀನುಗಳನ್ನು ಭೂ ಸ್ವಾಧೀನಪಡಿಸಿಕೊಳ್ಳಲು ಅಧಿಸೂಚನೆ ಸಂಖ್ಯೆ. ಹೆಚ್‌ಯುಡಿ 82, ಎಂಐಬಿ 82 ದಿನಾಂಕ :29.3. 1984 ರಲ್ಲಿ ಅಂತಿಮ ಪ್ರಕಟಣೆ ಹೊರಡಿಸಲಾಗಿದೆ. ಈ ಜಮೀನುಗಳ ಪೈಕಿ ಅದೇ ಅನುಸೂಚಿಯಲ್ಲಿ ಸೂಚಿಸಿರುವ ಜಮೀನುಗಳನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಭೂ ಸ್ವಾಧೀನ ಕ್ರಮದಿಂದ ಕೈಬಿಡಲಾಗಿದೆ.

ಸದರಿ ಜಮೀನಿನಲ್ಲಿ ಕಟ್ಟಡವನ್ನು ಕಟ್ಟಲು ಭೂ ಮಾಲೀಕರು ಇಚ್ಛಿಸಿದಲ್ಲಿ ಸ್ಥಳೀಯ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.

**ಅನುಸೂಚಿ**

**ಜಿಲ್ಲೆ:** ಮೈಸೂರು **ತಾಲ್ಲೂಕು:** ಮೈಸೂರು **ಗ್ರಾಮ:** ಹಿಮಕಲ್

| ಕ್ರ. ಸಂ | ಸರ್ವೆ ನಂ | ಖಾತಾ ದಾರರ/ ಅನುಭವದಾರರ ಹೆಸರು | ಸ್ವತ್ತಿನ ವಿವರ | | | | ಚೌತರ್ಫು | | | | ಭೂಸ್ವಾದೀನ ದಿಂದ ಕೈಬಿಟ್ಟ ವಿಸ್ತೀರ್ಣ ಎ.ಗುಂ |
|---|---|---|---|---|---|---|---|---|---|---|---|
| | | | ಖುಷ್ಕಿ ಎ.ಗುಂ | ಬಾಗಾಯ್ತು ಎ.ಗುಂ | ಖರಾಬು ಎ.ಗುಂ | ಜುಮ್ಲಾ ಎ.ಗುಂ. | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | |
| 1 | 294/1 | ಎ. ಸುಬ್ಬಣ್ಣ | 0-21 | - | - | 0-21 | ಸ.ನಂ 294/2 | ಖಾಸಗಿ ಜಮೀನು | ರಸ್ತೆ | ಸ.ನಂ. 293 | 0.21 |

**ಎನ್.ವೈ. ಸಾಗರ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 339

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ನ್ಯಾಯಾಲಯ ಹಾಸನ ಉಪವಿಭಾಗ, ಹಾಸನ**

**ಸಂಖ್ಯೆ: ಡಬ್ಲ್ಯೂಸಿಎ:ಎಫ್: ಎಸ್‌ಆರ್–98 /2007 ದಿನಾಂಕ : 5ನೇ ಮಾರ್ಚ್ 2007**

**ಅರ್ಜಿದಾರರು:**
1. ಶ್ರೀಮತಿ ಶೈಲಜ W/o
ಲೇಟ್ ಅನಂತರಾಮು ಎ.ಜೆ.
2. ಕುಮಾರಿ : ಆಶಾ ಎ D/o
ಲೇಟ್ ಅನಂತರಾಮು ಎ.ಜೆ.
3. ಕುಮಾರಿ ಸುಷ್ಮಾ ಎ.
ಅಗ್ರಹಾರ ಬೀದಿ, ನಂ–269, ಹಾಸನ

**ವಿರುದ್ಧ**

**ಪ್ರತಿವಾದಿಗಳು:**
1. ಶ್ರೀಮತಿ ರಾಜಶ್ರೀ W/o ಲೇಟ್ ಸಂತೋಷ್ ಕುಮಾರ್,
ಹಳೆ ಗಾಣಿಗೆರೆ ಬೀದಿ. ಹಾಸನ
2. ದಿ. ನ್ಯೂ ಇಂಡಿಯಾ ಅಶೂರೆನ್ಸ್ ಕಂ.ಲಿ
ಗಾಂಧಿಬಜಾರ್ ಹಾಸನ.

**ಅಧಿಸೂಚನೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಅನಂತರಾಮು .ಎ..ಜೆ ರವರು ಪ್ರತಿವಾದಿಯಲ್ಲಿ ಇವರು ಕೆಲಸದ ಮೇಲಿದ್ದಾಗ ದಿನಾಂಕ :29.1.2006 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು, ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪ ವಿಭಾಗ, ಹಾಸನ

ಪಿ.ಆರ್. 362

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ನ್ಯಾಯಾಲಯ ಜಾಸನ ಜಿಲ್ಲೆ, ಹಾಸನ**

**ಸಂಖ್ಯೆ: ಕಾಪಕಾ:ಎಫ್:ಎಸ್‌ಆರ್‌ಎಸ್–116 /2007 ದಿನಾಂಕ : 8ನೇ ಮಾರ್ಚ್ 2007**

**ಅರ್ಜಿದಾರರು:**
1. ಶ್ರೀಮತಿ ಜಯಮ್ಮ ಕೋಂ ಲೇಟ್ ಭೈರಯ್ಯ
ಕೆ:ಆಫ್ ಕೆಂಪಸಿದ್ದಯ್ಯ,
ಅಶೋಕ ಬಡಾವಣೆ, ಆಡುವಳ್ಳಿ, ಹಾಸನ
ತಾಲ್ಲೂಕು ಮತ್ತು ಜಿಲ್ಲೆ

**ವಿರುದ್ಧ**

**ಪ್ರತಿವಾದಿಗಳು:**
1. ಶ್ರೀ ಹೆಚ್.ಎನ್,. ರಾಮಮೂರ್ತಿ ಬಿನ್ ಸುಬ್ಬರಾವ್,
ನಂ:89:2003, ಮಲ್ಲೇಶ್ವರಂ, ಬೆಂಗಳೂರು.
2. ದಿ ಓರಿಯೆಂಟಲ್ ಇನ್‌ಶೂರೆನ್ಸ್ ಕಂ.ಲಿ,
ರಾಜಾಜಿನಗರ, ಬೆಂಗಳೂರು.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಭೈರಯ್ಯ ರವರು ಪ್ರತಿವಾದಿಯಲ್ಲಿ ಇವರು ಕೆಲಸದ ಮೇಲಿದ್ದಾಗ ದಿನಾಂಕ :6.7.2006 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನದನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಎಸ್. ರಾಮಕೃಷ್ಣ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪ ವಿಭಾಗ, ಹಾಸನ

ಪಿ.ಆರ್. 363

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಹಾಸನ ಜಿಲ್ಲೆ, ಹಾಸನ**

**ಸಂಖ್ಯೆ: ಕಾಪಕಾ :ಎಫ್:ಎಸ್‌ಆರ್–107 /2007 ದಿನಾಂಕ : 5ನೇ ಮಾರ್ಚ್ 2007**

**ಅರ್ಜಿದಾರರು:**
1. ಶ್ರೀಮತಿ ಜಯಮ್ಮ W/o
ಲೇಟ್ ಬೋಜಾಚಾರಿ
2. ಕುಮಾರಿ : ಪ್ರೇಮಾ
3. ವೆಂಕಟಾಚಾರಿ ಎ ಅಣ್ಣಾಚಾರ್
4. ಗೌರಮ್ಮ W/o ವೆಂಕಟಾಚಾರಿ
ಸತ್ತಿಗರಹಳ್ಳಿ ಕೊಪ್ಪಲು,
ಕಂಗ್ಲೆ ಅಂಚೆ, ಕಟ್ಟಾಯ ಹೋಬಳಿ, ಹಾಸನ ತಾ:

**ವಿರುದ್ಧ**

**ಪ್ರತಿವಾದಿಗಳು:**
1. ಹಾಸನ ಬಯೋಮೆಸ್ ಪವರ್ ಪ್ರೈ.ಲಿ.ನಂ–ಡಿ–1–003
ವೈಟ್ ಹೌಸ್ 6ನೇ ಮುಖ್ಯರಸ್ತೆ, 15ನೇ ಕ್ರಾಸ್, R.T. ನಗರ, ಬೆಂಗಳೂರು.
2. ಹಾಸನ ಬಯೋಮೆಸ್ ಪವರ್‌ಪ್ಲಾಟ್ ಹಾಸನ.
3. ಮೆ : ಸುರೇಶ ಮಲ್ಬಾನಿ ಮತ್ತು ಕಂ ರಾಣೆಬೆನ್ನೂರು

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಭೈರಯ್ಯ ರವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ :14.2..2006 ರಂದು ಸಾವನ್ನಪ್ಪಿದರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ಅವಲಂಭಿತರಾರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಎಸ್. ರಾಮಕೃಷ್ಣ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪ ವಿಭಾಗ, ಹಾಸನ

ಪಿ.ಆರ್. 364

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂಖ್ಯೆ: ಡಬ್ಲ್ಯೂಸಿಎ:ಎಫ್:ಎಸ್‌ಆರ್–106 /2007**

**ಅರ್ಜಿದಾರರು:**
1. ಶ್ರೀಮತಿ ಗೀತಾ ಕೋಂ ಕುಮಾರ್,
2. ತೇಜಸ್ವಿನಿ ಬಿನ್ ಕುಮಾರ್,
3. ಲಕ್ಷ್ಮಮ್ಮ ಕೋಂ ಬಸವರಾಜು,
4. ಬಸವರಾಜು ಬಿನ್ ಲೇಟ್ ರುದ್ರಶೆಟ್ಟಿ,
ಶನಿದೇವರ ದೇವಸ್ಥಾನದ ರಸ್ತೆ, ಚನ್ನರಾಯಪಟ್ಟಣ.

**ವಿರುದ್ಧ**

**ಪ್ರತಿವಾದಿಗಳು:**
1. ಶ್ರೀ ನವೀದ್ ಬಿನ್ ನೂರ್ ಮೊಹಮ್ಮದ್, ಜನರಲ್ ಮರ್ಚೆಂಟ್, ಚೋಟಾ ಮೊಹಲ್ಲಾ, ಬಾಗೂರು ರಸ್ತೆ, ಚನ್ನರಾಯಪಟ್ಟಣ.
2. ದಿ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ ಶೂರೆನ್ಸ್ ಕಂ.ಲಿ, ರಾಘವೇಂದ್ರ ಕಾಲೋನಿ, ಬಿ.ಹೆಚ್. ರಸ್ತೆ, ತಿಪಟೂರು.

**ಪ್ರಕಟಣೆ**

ಕುಮಾರ್ ಎಂಬುವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:11.4.2006 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ " ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದು. ನಿಗಧಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರು ಇಲ್ಲಿ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಎಸ್. ರಾಮಕೃಷ್ಣ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಹಾಸನ ಜಿಲ್ಲೆ, ಹಾಸನ

ಪಿ.ಆರ್. 366

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ನ್ಯಾಯಾಲಯ ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.**

**ಪ್ರಕರಣ ಸಂಖ್ಯೆ: ಕಾನಪ : ಪ್ರ : F-CR /66/07 ದಿನಾಂಕ : 12ನೇ ಮಾರ್ಚ್ 2007**

**ಅರ್ಜಿದಾರರು:**
1. ಜಿ. ಪುಟ್ಟಲಿಂಗಪ್ಪ
2. ಹೆಚ್. ಮಂಜಮ್ಮ
3. ಜಿ.ಪಿ. ತಿಪ್ಪೇಸ್ವಾಮಿ,
ವಾಸ: ಮಲ್ಲಾಪುರ ಗ್ರಾಮ.

**ವಿರುದ್ಧ**

**ಪ್ರತಿವಾದಿಗಳು:**
1. ಟಿ. ಮಂಜಣ್ಣ ಲಾರಿ ಮಾಲೀಕರು KA-16/A-405 ಚಿತ್ರದುರ್ಗ.
2. ಓರಿ–ಇನ್. ಕಂ.ಲಿ ಚಿತ್ರದುರ್ಗ.

**ಪ್ರಕಟಣೆ**

ಅರ್ಜಿದಾರನಾದ / ಶ್ರೀಮತಿ /ಶ್ರೀ ಜಿ. ಪುಟ್ಟಲಿಂಗಪ್ಪ, ಹೆಚ್. ಮಂಜಮ್ಮ ಜಿ.ಪಿ. ತಿಪ್ಪೇಸ್ವಾಮಿ, ಇವರು ತಾವು ಮೃತ ಜಿ. ಗುರುಬಸಪ್ಪ ಮಗ, ಸೊಸೆ ಮತ್ತು ಮೊಮ್ಮಗ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ.

ಮೃತ ಜಿ. ಗುರುಬಸಪ್ಪ ಇವರು ಒಂದನೇ ಪ್ರತಿವಾದಿಗಳಾದ ಟಿ. ಮಂಜಣ್ಣ ಇವರಲ್ಲಿ "ಕ್ಲೀನರ್" ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಬಂಧಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧಿಸಿದ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು. ಎಂದು

ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ನ್ಯಾಯಾಲಯ ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.**

**ಪ್ರಕರಣ ಸಂಖ್ಯೆ: ಕಾನಪ : ಪ್ರ : F-CR /71/07 ದಿನಾಂಕ : 12ನೇ ಮಾರ್ಚ್ 2007**

**ಅರ್ಜಿದಾರರು:**
1. ತಿಮ್ಮಯ್ಯ
2. ಈರಮ್ಮ
ವಾಸ: ಬೇಡರೆಡ್ಡಿ ಹಳ್ಳಿ ತಳಕು ಹೋಬಳಿ.

**ವಿರುದ್ಧ ಪ್ರತಿವಾದಿಗಳು:**
1. ನಾಗರೆಡ್ಡಿ, ಲಾರಿ ಮಾಲೀಕರು KA-34/-3068 ಬೇಡರೆಡ್ಡಿ ಹಳ್ಳಿ, ತಳಕು ಹೋಬಳಿ.
2. ಓರಿ-ಇನ್. ಕಂ.ಲಿ ಹುಬ್ಬಳ್ಳಿ.

**ಪ್ರಕಟಣೆ**

ಅರ್ಜಿದಾರನಾದ / ಶ್ರೀ : ಶ್ರೀಮತಿ ತಿಮ್ಮಯ್ಯ ಈರಮ್ಮ ಇವರು ತಾವು ಮೃತ ಗೋವಿಂದರಾಜು ತಂದೆ ಮತ್ತು ತಾಯಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ.

ಮೃತ ಗೋವಿಂದರಾಜು ಇವರು ಒಂದನೇ ಪ್ರತಿವಾದಿಗಳಾದ ನಾಗರೆಡ್ಡಿ ಇವರಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಬಂಧಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧಿಸಿದ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು. ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ನ್ಯಾಯಾಲಯ ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.**

**ಪ್ರಕರಣ ಸಂಖ್ಯೆ: ಕಾನಪ : ಪ್ರ : F-CR /69/07 ದಿನಾಂಕ : 12ನೇ ಮಾರ್ಚ್ 2007**

**ಅರ್ಜಿದಾರರು:**
1. ಕಮ್ರುನ್ನೀಸಾ
ಕೋ/o ಮೊ :ಹುಸೈನ್
ಶ್ರೀರಾಂಪುರ ಗ್ರಾಮ
ಹೊಸದುರ್ಗ ತಾ:

**ವಿರುದ್ಧ ಪ್ರತಿವಾದಿಗಳು:**
1.ಮೊಹಮದ್ ಜಫ್ಲರ್ ಸಾಬ್ ಲಾರಿ ಮಾಲೀಕರು KA-44/136 ಹುಳಿಯಾರ್, C.N ಹಳ್ಳಿ
2. ದಿ. ಮ್ಯಾನೇಜರ್, ದಿ ಓರಿ-ಇನ್. ಕಂ.ಲಿ ಚೆನ್ನೈ, ತಮಿಳುನಾಡು ರಾಜ್ಯ
3. ಓರಿ-ಇನ್-ಕಂಲಿ ಚಿತ್ರದುರ್ಗ.

**ಪ್ರಕಟಣೆ**

ಅರ್ಜಿದಾರನಾದ / ಶ್ರೀ /ಶ್ರೀಮತಿ ಕಮ್ರುನ್ನೀಸಾ ಇವರು ತಾವು ಮೃತ ದಾದಾಫೀರ್ ಇವರ ತಾಯಿ ಮತ್ತು ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ.

ಮೃತ ದಾದಾಫೀರ್ ಇವರು ಒಂದನೇ ಪ್ರತಿವಾದಿಗಳಾದ ಮೊಹಮದ್ ಜಫ್ಲರ್ ಸಾಬ್ ಇವರಲ್ಲಿ " ಲಾರಿ ಕ್ಲೀನರ್" ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಬಂಧಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧಿಸಿದ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು. ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ

ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ನ್ಯಾಯಾಲಯ ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.**

**ಪ್ರಕರಣ ಸಂಖ್ಯೆ: ಕಾನಪ : ಪ್ರ : F-CR /67/07 ದಿನಾಂಕ : 7ನೇ ಮಾರ್ಚ್ 2007**

**ಅರ್ಜಿದಾರರು:**
1. ಮುತ್ತುಲಕ್ಷ್ಮಿ P.
Naranmmlapuram,
Tirunelveli Dist,
Tamilnadu

**ವಿರುದ್ಧ**

**ಪ್ರತಿವಾದಿಗಳು:**
1. MCK Kutty, S.L.R. Steels Ltd. Paramenahally Village,
2.S.L.R. Steels Ltd,Managing Director,Paramenahally.
3. United India Insurance Co. Ltd. ಭದ್ರಾವತಿ

**ಪ್ರಕಟಣೆ**

ಅರ್ಜಿದಾರನಾದ / ಶ್ರೀ /ಶ್ರೀಮತಿ ಮುತ್ತುಲಕ್ಷ್ಮೀ P ಇವರು ತಾವು ಮೃತ P ಚೆಲ್ಲಪ್ಪ ಎ P ಪರಮಶಿವನ್ ಇವರ ತಾಯಿ ಮತ್ತು ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ.

ಮೃತ P ಚೆಲ್ಲಪ್ಪ ಎ P ಪರಮಶಿವನ್ ಇವರು ಒಂದನೇ ಪ್ರತಿವಾದಿಗಳಾದ S.L.R. Steels Ltd ಇವರಲ್ಲಿ " ಕೂಲಿ" ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಬಂಧಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧಿಸಿದ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು. ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ನ್ಯಾಯಾಲಯ ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.**

**ಪ್ರಕರಣ ಸಂಖ್ಯೆ: ಕಾನಪ : ಪ್ರ : F-CR /70/07 ದಿನಾಂಕ : 12ನೇ ಮಾರ್ಚ್ 2007**

**ಅರ್ಜಿದಾರರು:**
1. ದ್ಯಾಮಕ್ಕ
2. ಬಸಮ್ಮ
3 ಗೀತ
ವಾಸ: ಬಳೀಗಟ್ಟೆ ಗ್ರಾಮ , ಚಿತ್ರದುರ್ಗ ತಾ:

**ವಿರುದ್ಧ**

**ಪ್ರತಿವಾದಿಗಳು:**
1. ಈಶ್ವರಪ್ಪ S/o ಶಿವರುದ್ರಪ್ಪ ಟ್ರ್ಯಾಕ್ಟರ್ ಟ್ರೈಲರ್ ಮಾಲೀಕರು KA-16/T-6393-94 ಬಳೀಗಟ್ಟೆ ಗ್ರಾಮ, ಬ್ಯಾಲಾಳು ಪೋಸ್ಟ್ ಚಿತ್ರದುರ್ಗ (ತಾ)
ಓರಿ-ಇನ್-ಕಂ-ಲಿ ಚಿತ್ರದುರ್ಗ.

**ಪ್ರಕಟಣೆ**

ಅರ್ಜಿದಾರನಾದ / ಶ್ರೀ /ಶ್ರೀಮತಿ ದ್ಯಾಮಕ್ಕ ಬಸಮ್ಮ ಗೀತ ಇವರು ತಾವು ಮೃತ ಈಶ್ವರಪ್ಪ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ.

ಮೃತ ಈಶ್ವರಪ್ಪ ಇವರು ಒಂದನೇ ಪ್ರತಿವಾದಿಗಳಾದ ಮೊಹಮದ್ ಈಶ್ವರಪ್ಪ ಇವರಲ್ಲಿ " ಕೂಲಿ" ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಬಂಧಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧಿಸಿದ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು. ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ನ್ಯಾಯಾಲಯ ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.**

**ಪ್ರಕರಣ ಸಂಖ್ಯೆ: ಕಾನಪ : ಪ್ರ : F-CR /65/07 ದಿನಾಂಕ : 12ನೇ ಮಾರ್ಚ್ 2007**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1. ಜಯಮ್ಮ
W/o lali ಮಲ್ಲೇಶಪ್ಪ
ಸಾಸಲಹಟ್ಟಿ ಚಿತ್ರದುರ್ಗ (ತಾ)

1. Chief Executive Windcare India Prt Ltd. Coimbatore.
2. Windcare India Prt Ltd, Represented by its Executive officer Technical Camp, Chitraduga.
3. Divisional Manager The oriental Insurance co-Ltd Hubli

**ಪ್ರಕಟಣೆ**

ಅರ್ಜಿದಾರನಾದ / ಶ್ರೀ /ಶ್ರೀಮತಿ ಜಯಮ್ಮ ಇವರು ತಾವು ಮೃತ ಗಿರೀಶ ಇವರ ತಾಯಿ ಮತ್ತು ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ.

ಮೃತ ಗಿರೀಶ S/o ಮಲ್ಲೇಶಪ್ಪ ಇವರು ಒಂದನೇ ಪ್ರತಿವಾದಿಗಳಾದ Swindcare India Prt ltd ಇವರಲ್ಲಿ "ಎಲೆಕ್ಟ್ರಿಕಲ್ ಆಪರೇಟರ್" ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಬಂಧಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧಿಸಿದ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು. ಎಂದು ಪರಿಗಣಿಸಬೇಕೆಂದು ಪ್ರಾರ್ಥೀಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ನ್ಯಾಯಾಲಯ ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.**

**ಪ್ರಕರಣ ಸಂಖ್ಯೆ: ಕಾನಪ : ಪ್ರ : F-CR /68/07 ದಿನಾಂಕ : 12ನೇ ಮಾರ್ಚ್ 2007**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1. ಜುಬೈದಾಬಿ
2. ತಹೀರಾ
3. ಜಮೀರಾ
4. ನಫೀರಾ

ಎಲ್ಲರೂ ವಾಸ :ಹೊಸನಗರ ಶಿವಮೊಗ್ಗ

1. M.C.K. Kutty Managing Director C/o S.L.R. Steels Ltd. Paramena hally.
2. S.L.R. Stells Ltd Paramena Hally
3. United India Insurance Co-Ltd Bhadravathi.

**ಪ್ರಕಟಣೆ**

ಅರ್ಜಿದಾರನಾದ / ಶ್ರೀ /ಶ್ರೀಮತಿ ಜುಬೈದಾಬಿ, ತಹೀರಾ ಜಮೀರಾ ನಫೀರಾ ಇವರು ತಾವು ಮೃತ Madinkoya ಇವರ ಹೆಂಡತಿ, ಮಕ್ಕಳು ಮತ್ತು ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ.

ಮೃತ Maidin koya ಇವರು ಒಂದನೇ ಪ್ರತಿವಾದಿಗಳಾದ M.C.K. Kutty S.L.R. Steals L.TD ಇವರಲ್ಲಿ "Muchanical Contractors" ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಬಂಧಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧಿಸಿದ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು. ಎಂದು ಪರಿಗಣಿಸಬೇಕೆಂದು ಪ್ರಾರ್ಥೀಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ

ಪಿ.ಆರ್. 367